# 'ಡಾ. ಕರೀಗೌಡ ಬೀಚನಹಳ್ಳಿ ಕಥೆಗಳಲ್ಲಿ ಗ್ರಾಮ ಸಮಾಜದ ಸ್ವರೂಪ'

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೦೯-೨೦೧೦

# 'ಡಾ. ಕರೀಗೌಡ ಬೀಚನಹಳ್ಳಿ ಕಥೆಗಳಲ್ಲಿ ಗ್ರಾಮ ಸಮಾಜದ ಸ್ವರೂಪ'

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧಕರು - ಕುಮಾರ ಎಚ್
ಮಾರ್ಗದರ್ಶಕರು - ಅಮರೇಶ ನುಗಡೋಣಿ





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬
೨೦೦೯-೨೦೧೦





## ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಸ್ವರೂಪ, ಉದ್ದೇಶ, ಮಹತ್ವ, ವ್ಯಾಪ್ತಿ ಹಾಗೂ ವಿಧಾನ

### ಅಧ್ಯಯನದ ಸ್ವರೂಪ

ಬ್ರಿಟಿಷ್ ವಸಾಹತು ಕಾಲಾವಧಿಯಲ್ಲಿ, ಸಮಾಜ ಬದಲಾವಣೆಯಾಗತೊಡಗಿತು. ಮುಖ್ಯವಾಗಿ ಹೊಸ ಶಿಕ್ಷಣ ಪದ್ಧತಿಯಿಂದ ಹೊಸ ವಿಷಯಗಳನ್ನು ಜನರು ಅರಿಯತೊಡಗಿದರು. ಹೊಸ ಚಿಂತನೆಗಳು, ಹೊಸ ಆಲೋಚನೆಗಳು ಜನರನ್ನು ಬದಲಾವಣೆಗೆ ಗುರಿ ಮಾಡಿದವು. ಜ್ಞಾನದ ಕ್ಷೇತ್ರಗಳು ಹಲವಿದ್ದು, ಅವರನ್ನು ಅರಿಯುವ, ಗ್ರಹಿಸುವ ಮೂಲಕ ಜನರು ಪ್ರಗತಿಯನ್ನು ಸಾಧಿಸಲು ಮುಂದಡಿ ಇಡಲಾರಂಭಿಸಿದ. ಬ್ರಿಟಿಷ್ ಆಳ್ವಿಕೆಯಿಂದ ಭಾರತೀಯರು ತಮ್ಮ ಅನುಭವಗಳನ್ನು, ಜ್ಞಾನವ್ನು ಹೊಸದಾಗಿ ಆಲೋಚಿಸಿ ವ್ಯಾಖ್ಯಾನಿಸಲು ಸಿದ್ಧವಾದ ಸಮಾಜ ಸಾಂಪ್ರದಾಯಿಕವಾಗಿತ್ತು. ಬ್ರಿಟಿಷರ ಪ್ರಗತಿಪರ ಚಿಂತನೆಗಳು, ವೈಚಾರಿಕ ಆಲೋಚನೆಗಳು ಸಾಂಪ್ರದಾಯಿಕ ಸಮಾಜವನ್ನು ಬದಲಿಸುತ್ತ ಆಧುನಿಕ ಸಮಾಜದೆಡೆಗೆ ಕರೆದೊಯ್ಯಲು ಪ್ರೇರಣೆ ನೀಡಿದವು.

ಬ್ರಿಟಿಷ್ ವಸಾಹತು ಆಡಳಿತದ ಪರಿಣಾಮವಾಗಿ ಸಾಹಿತ್ಯ ವಲಯದಲ್ಲಿಯೂ ಹೊಸತನ ಮೂಡಿತು. ಪಶ್ಚಿಮದ ಸಾಹಿತ್ಯವನ್ನು ಅರಿಯಲು, ಗ್ರಹಿಸಲು ಇಂಗ್ಲೀಷ್ ಭಾಷೆ ಸಹಾಯ ಮಾಡಿತು. ಸಮಾಜ, ರಾಜಕೀಯ, ಶಿಕ್ಷಣ, ವಿಜ್ಞಾನ, ತಂತ್ರಜ್ಞಾನ ಮುಂತಾದ ಜ್ಞಾನ ವಲಯಗಳಲ್ಲಿ ನಡೆಯುವ ಹೊಸ ಆವಿಷ್ಕಾರಗಳನ್ನು ತಿಳಿಯಲು ಇಂಗ್ಲೀಷ್ ಭಾಷೆ ಸಹಾಯ ಮಾಡಿತು. ಇಂಗ್ಲೀಷ್ ಸಾಹಿತ್ಯ ವಲಯದ ಬೆಳವಣಿಗೆಗಳನ್ನು ಗಮನಿಸಿದ ಕನ್ನಡ ಸಾಹಿತ್ಯಿಕ ಆಸಕ್ತರು, ಸಾಹಿತಿಗಳು ಕನ್ನಡದ ಪ್ರಾದೇಶಿಕತೆಗಳಿಗೆ ಅನುಗುಣವಾಗಿ ಮರುಸೃಷ್ಟಿಗೆ ತೊಡಗಿದರು. ಅದರ ಫಲವಾಗಿ ಪಶ್ಚಿಮದ ಅನೇಕ ಸಾಹಿತ್ಯ ಪ್ರಕಾರಗಳು ಕನ್ನಡದಲ್ಲಿ ಮಾಡತೊಡಗಿದವು. ಕಥಾಪ್ರಕಾರ ಅವುಗಳಲ್ಲೊಂದು.

ಆಧುನಿಕ ಕನ್ನಡ ಸಣ್ಣಕಥೆಗಳಿಗೆ ಪಶ್ಚಿಮದ ಪ್ರಭಾವವಿದೆ. ಎಂಬುದು ನಿಜ. ಆದರೂ ಕನ್ನಡ ಸಾಹಿತ್ಯದಲ್ಲಿ ಸಣ್ಣಕಥೆಗಳು ಇದ್ದವು. ಪಂತಂತ್ರದ ಕಥೆಗಳು ಅಕ್ಬರ್–ಬೀರಬಲ್ಲರ ಕಥೆಗಳು, ತೆನಾಲಿ ರಾಮಕೃಷ್ಣನ ಕಥೆಗಳು, ಕಥಾಸಂತ್ಸಾಗರ ಮತ್ತು ವಡ್ಡಾರಾಧನೆ, ಧರ್ಮಾಮೃತಗಳ ಕಥೆಗಳು ಜನಪ್ರಿಯವಾಗಿವೆ. ಜೈನರ ಈ ಎರಡು ಕೃತಿಗಳು ಪ್ರಾಚೀನ

ಸಾಹಿತ್ಯವನ್ನು, ಪ್ರಸಿದ್ಧಿಯನ್ನು ಪಡೆದಿವೆ. ಜೈನ ಮಹಾಕಾವ್ಯ ಪುರಾಣಗಳಲ್ಲೂ ಉಪಕಥೆಗಳ ರೂಪದಲ್ಲಿ ಕಥೆಗಳಿವೆ. ಹರಿಹರನ ರಗಳೆಗಳು ಕಥೆಗಳೇ ಆಗಿವೆ. ಮಧ್ಯಕಾಲೀನ ಪುರಾಣ ಗ್ರಂಥಗಳಲ್ಲಿ ಶರಣರ ಕಥೆಗಳು ಬೇಕಾದಷ್ಟು ಸಿಗುತ್ತವೆ. ಈ ಕಥೆಗಳನ್ನು ಕನ್ನಡದ ಹಿರಿಯ ತಲೆಮಾರಿನ ಲೇಖಕರು ಓದಿದ್ದರು. ಪಶ್ಚಿಮದ ಕಥಾಸಾಹಿತ್ಯವನ್ನು ಓದಿ ಗ್ರಹಿಸಿಯೇ ಕನ್ನಡದ ಪ್ರಾದೇಶಿಕತೆಗೆ ಅನುಗುಣವಾಗಿ, ಇಲ್ಲಿನ ಬದುಕಿಗೆ ಅನುಗುಣವಾಗಿ, ತಮ್ಮ ದೃಷ್ಟಿಕೋನಕ್ಕೆ ತಕ್ಕಂತೆ ಆಧುನಿಕ ಕನ್ನಡ ಸಣ್ಣಕಥೆಗಳನ್ನು ರೂಪಿಸಿ ರಚಿಸಿದರು.

ಪಂಜೆ ಮಂಗೇಶರಾಯ, ಕೆರೂರು ವಾಸುದೇವರಾಯ, ಎಂ.ಎನ್. ಕಾಮತ್ ಮುಂತಾದವರು ಕಥೆಗಳನ್ನು ಬರೆದರು. ಮಾಸ್ತಿಯವರು ಸಣ್ಣಕಥೆಗಳನ್ನು ಬರೆಯುತ್ತ ತಮ್ಮ ಪ್ರಧಾನ ಅಭಿವ್ಯಕ್ತಿ ವಿಧಾನವನ್ನೇ ಕಥೆಗಳ ಮೂಲಕ ತೋರಿಸಿದರು. ಮಹತ್ವದ ಸಾಧನೆಯನ್ನು ಮಾಡಿದರು. ಹಾಗೇ ನೋಡಿದರೆ ಮೊದಲ ತಲೆಮಾರಿನ ಹಿರಿಯ ಲೇಖಕರು ಕಾವ್ಯಕ್ಕೆ ಒಲಿದರವರು ಕಾದಂಬರಿಗಳನ್ನು ಪ್ರಧಾನ ಪ್ರಕಾರವೆಂದು ತಿಳಿದವರು. ಮಾಸ್ತಿ ಅವರು ಮಾತ್ರ ಕಥೆಗಳನ್ನು ಬರೆದು ಅದರ ಆಳ-ಅಗಲಗಳನ್ನು ಶೋಧಿಸಿದರು, ಬೇಂದ್ರೆ, ಕುವೆಂಪು, ಸೇಡಿಯಾಪು, ಕೃಷ್ಣ ಭಟ್ ಮುಂತಾದವರು ಕಥೆಯನ್ನು ಇಷ್ಟಪಟ್ಟು ಕೆಲವು ಕಥೆಗಳನ್ನು ಬರೆದರು. ಮೊದಲ ತಲೆಮಾರಿನವರು ಪ್ರಧಾನ ಅಭಿವ್ಯಕ್ತಿಯಾಗಿ ಮಾಸ್ತಿ ಅವರನ್ನು ಹೊರತುಪಡಿಸಿ ಉಳಿದವರು ಮಾಡಿಕೊಳ್ಳದೇ ಇದ್ದರೂ ತಕ್ಕಮಟ್ಟಿಗೆಕಥೆಗಳನ್ನು ರಚಿಸಿದರು.

ಆದರೆ ನವ್ಯ ಸಾಹಿತ್ಯದ ಕಾಲಾವಧಿಯಲ್ಲಿ ಕಥಾಸಾಹಿತ್ಯ ಸಮೃದ್ಧವಾಗಿ ರಚನೆಯಾಯಿತು. ಹೊಸ ತಾತ್ವಿಕತೆಯನ್ನು ಹೊತ್ತ ಕಥೆಗಳು, ವಿವಿಧ ಪ್ರಯೋಗಗಳೊಂದಿಗೆ ಸತ್ವಯುತವಾಗಿ ರಚನೆಯಾದವು. ಅಡಿಗರೂ ಕಥೆಗಳನ್ನು ಬರೆದರು. ಯಶವಂತ ಚಿತ್ತಾಲ, ಬಿ.ಸಿ. ರಾಮಚಂದ್ರಶರ್ಮ, ಎ.ಕೆ. ರಾಮಾನುಜನ್, ಅನಂತಮೂರ್ತಿ, ಲಂಕೇಶ, ತೇಜಸ್ವಿ, ಕೆ. ಸದಾಶಿವ, ಜಿ.ಎಸ್. ಸದಾಶಿವ, ರಾಘವೇಂದ್ರ ಖಾಸನೀಸ್, ಆಲನಹಳ್ಳಿ ಮುಂತಾದವರು ಹಲವು ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿದರೂ ಕಥೆಗಳನ್ನು ಪ್ರಬುದ್ಧವಾಗಿ ಬರೆದಿದ್ದಾರೆ. ಈ ಹೊತ್ತಿಗೂ ಶತಮಾನದ ಅತ್ಯುತ್ತಮ ಕಥೆಗಳು ಎಂದು ಪರಿಗಣಿಸಿದರೆ ನವ್ಯ ಕಥೆಗಳ ಪಾಲು ದೊಡ್ಡದಿರುತ್ತದೆ.

ಇವರ ಬೆನ್ನ ಹಿಂದೆ ಪ್ರಗತಿಶೀಲ ಕಥೆಗಳನ್ನು ಬರೆದರು. ಬಸವರಾಜ ಕಟ್ಟೀಮನಿ, ತ.ರಾ.ಸು., ನಿರಂಜನ, ಅನಕೃ, ಅನುಪಮ ನಿರಂಜನ, ತ್ರಿವೇಣಿ, ವ್ಯಾಸರಾಯ ಬಲ್ಲಾಳ ಮುಂತಾದವರು ಕಥೆಗಳನ್ನು ಬರೆದರು. ಸಮಾಜ ಸುಧಾರಣೆಯ ಗುರಿಯನ್ನು ಇಟ್ಟುಕೊಂಡು ಕಥೆಗಳನ್ನು ಬರೆದರು. ಸಾಹಿತ್ಯತನ ಕಡಿಮೆಯಾಗುತ್ತ ಕಲಾತ್ಮಕತೆಗೆ ಗಮನ ಕೊಡಲಿಲ್ಲ. ಅವಸರದ ರಚನೆಗಳು ಎಂಬ ವಿಮರ್ಶೆಗಳು ಪ್ರಗತಿಶೀಲ ಕಥೆಗಾರರನ್ನು ಕುರಿತು ವ್ಯಕ್ತವಾದವು. ಆದರೂ ಕನ್ನಡ ಸಾಹಿತ್ಯಕ್ಕೆ ಅವರ ಕೊಡುಗೆಯೂ ಇದೆ. ದುಡಿವ ವರ್ಗದ ಶೋಷಣೆಯನ್ನು ಬಂಡವಾಳಿಗರ ಕ್ರೌರ್ಯವನ್ನು ಗಾಢವಾಗಿ ಚಿತ್ರಿಸಿದರು.

ಮುಂದೆ ಬಂಡಾಯ ದಲಿತ ಸಾಹಿತ್ಯ ಚಳುವಳಿಯ ಕಾಲದಲ್ಲಿಯೂ ಸಮಾಜದ ಅಂಚಿನಲ್ಲಿ ಬದುಕಿತ್ತಿದ್ದ ಸಮುದಾಯಗಳಿಂದ ಲೇಖಕರು ಮೂಡಿಬಂದರು. ಭೂಮಾಲೀಕರು, ಅಧಿಕಾರಸ್ಥರ ಅಧಿಕಾರದಿಂದ ಹಿಂದುಳಿದ ಜಾತಿಗಳು, ಶೂದ್ರರು, ದಲಿತರು ಪಡುವ

ಅವಮಾನಗಳನ್ನು ಕುರಿತು ಕಥೆಗಳನ್ನು ಬರೆದರು. ದಲಿತರ ನೋವು, ಅಪಮಾನಗಳನ್ನು ಅನುಭವಿಸಿದವರೇ ಅಭಿವ್ಯಕ್ತಿಸುವ ಬೆಳವಣಿಗೆಗಳಾದವು. ಇದರಿಂದ ಅಧಿಕೃತತೆಯೂ ಕಥೆಗಳಿಗೆ ಒದಗಿತು. ಹೀಗೆ ಕನ್ನಡ ಸಾಹಿತ್ಯದಲ್ಲಿ ಹೊಸ ಸಂವೇದನೆಯಾಗಿ ಮುಸ್ಲಿಂ ಸಂವೇದನೆ, ದಲಿತ ಸಂವೇದನೆ, ಮಹಿಳಾ ಸಂವೇದನೆಗಳು ಅಭಿವ್ಯಕ್ತಗೊಂಡವು. ಮಹಿಳೆಯರೂ ಈ ಕಾಲದಲ್ಲಿ ಸ್ವತಂತ್ರವಾಗಿ ಆಲೋಚಿಸಿ, ತಮ್ಮ ಅನುಭವಗಳನ್ನು ಬರೆದರು. ಮುಸ್ಲಿಮರೂ ಬರೆದರು. ದಲಿತರೂ ಬರೆದರು. ಈ ಕಾಲಾವಧಿಯಲ್ಲಿ ವೈವಿಧ್ಯಮಯ ಸಮುದಾಯಗಳ ಮೂಲದಿಂದ ಬಂದ ಲೇಖಕರಿಂದ ಹೊಸ ಸಂವೇದನೆಯಿಂದ ಕೂಡಿದ ಕಥೆಗಳು ರಚನೆಗೊಂಡವು. ಕಥಾಸಾಹಿತ್ಯವು ಅನನ್ಯವಾಗಿ ಬೆಳೆಯಿತು. ದೇವನೂರು, ಕಂ.ವಿ. ಬೋಳವಾರು, ಕಪ್ಪಾಡಿ, ಸಾರಾ, ಕೆ. ಸತ್ಯನಾರಾಯಣ, ರಾಘವೇಂದ್ರ ಪಾಟೀಲ, ವೈದೇಹಿ, ಜಯಂತ ಕಾಯ್ಕಿಣಿ, ಬಾನು ಮುಷ್ತಾಕ್, ಮೊಗಳ್ಳಿ ಗಣೇಶ ಮುಂತಾದವರು ಬರೆದರು.

## ಅಧ್ಯಯನದ ಉದ್ದೇಶ

ಡಾ. ಕರೀಗೌಡ ಬೀಚನಹಳ್ಳಿ ಅವರು ನವ್ಯ ಮತ್ತು ದಲಿತ ಬಂಡಾಯ ಸಾಹಿತ್ಯ ಚಳುವಳಿ ನಡುವೆ ಬರೆದರು. ಅಂದರೆ ನವ್ಯ ಬದಲಾವಣೆಗೆ ಹಾತೊರೆಯುತ್ತಿದ್ದ ಕಾಲಾವಧಿಯಲ್ಲಿ ಬಂಡಾಯ ದಲಿತ ಸಾಹಿತ್ಯ ಹುಟ್ಟಿ ರೂಪ ಪಡೆಯುತ್ತಿದ್ದ ಕಾಲಾವಧಿಯಲ್ಲಿ ಬರೆಯಲಾರಂಭಿಸಿದವರು. ಅತ್ತ ನವ್ಯದ ಧೋರಣೆಯನ್ನು ಅನುಸರಿಸದೆ ಇತ್ತ ದಲಿತ ಬಂಡಾಯದ ಧೋರಣೆಯನ್ನು ಹೊಂದದೆ ತಮ್ಮದೇ ಆದ ನೆಲೆಯಲ್ಲಿ ಕಥೆಗಳನ್ನು ಬರೆದ ವಿಶಿಷ್ಟ ಕಾಣಿಕೆಯನ್ನು ಕಥಾಸಾಹಿತ್ಯಕ್ಕೆ ನೀಡಿದ್ದಾರೆ. ಯಾವಾಗಲೂ ಕಥೆಗಾರರು ತಮ್ಮ ಕಾಲದ ಸಾಹಿತ್ಯ ಚಳುವಳಿಯ ಜೊತೆತಗೆ ಹೊಂದಿಕೊಂಡು ಬರೆಯುವುದು ಸಹಜ. ಆ ಸಾಹಿತ್ಯ ಚಳುವಳಿಯ ತಾತ್ವಿಕತೆಯೊಂದು ಸಿದ್ಧವಾಗಿ ದಕ್ಕುತ್ತದೆ. ಅದನ್ನು ತಮ್ಮ ಅನುಭವಗಳ ಮೂಲಕ ಅಭಿವ್ಯಕ್ತಿಸುತ್ತ ಸಾಗುತ್ತರೆ. ಪ್ರತಿಭಾನ್ವಿತರು ಆ ತಾತ್ವಿಕತೆಯನ್ನು ವಿಸ್ತರಿಸುತ್ತಾರೆ. ಅದರಲ್ಲಿಯೇ ಅನನ್ಯತೆಯನ್ನು ಮೆರೆಯುತ್ತಾರೆ. ಕೆಲವರು ಆ ತಾತ್ವಿಕತೆಯನ್ನು ಬಿಂಬಿಸುವತ್ತ ಸಾಹಿತ್ಯ ರಚಿಸುತ್ತ ಸಾಗುತ್ತಾರೆ. ಆದರೆ ಕೆಲವರು ತಮ್ಮ ಕಾಲದ ಸಂಕ್ರಮಣ ಅವ್ಯವಸ್ಥೆಗೆ ಈಡಾಗಿ ಬಿಕ್ಕಟ್ಟು ಎದುರಿಸುತ್ತಾರೆ. ಅದನ್ನು ನಿಭಾಯಿಸಿಕೊಂಡು ಸಾಹಿತ್ಯ ರಚನೆಗೆ ತೊಡಗುತ್ತಾರೆ. ಇದನ್ನು ಶೋಧಿಸುವ ಉದ್ದೇಶದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

## ಅಧ್ಯಯನದ ಮಹತ್ವ:

ಡಾ. ಕರೀಗೌಡ ಬೀಚನಹಳ್ಳಿ ಅವರು ಕಥಾಸಾಹಿತ್ಯವನ್ನು ಗಮನಿಸಿದಾಗ ಅವರು ಬರೆಯುತ್ತಿದ್ದ ಕಾಲಾವಧಿಯಲ್ಲಿ ದಲಿತ ಬಂಡಾಯ ಸಾಹಿತ್ಯ ಚಳುವಳಿ ಪ್ರಭಾವದಿಂದ ಜಾತಿ ಮತ್ತು ಅವರ ನೋವು ಅವಮಾನಗಳನ್ನು ಕುರಿತು, ಶೋಷಣೆಗೆ ಒಳಗಾದ ಬದುಕನ್ನು ಕುರಿತು ಸಾಹಿತ್ಯ ರಚನೆಯಾಗುತ್ತಿತ್ತು. ಇಂತಹ ಸಂದರ್ಭದಲ್ಲಿ, ಡಾ. ಕರೀಗೌಡ ಬೀಚನಹಳ್ಳಿ ಅವರು ಗ್ರಾಮೀಣ ಪ್ರದೇಶದಲ್ಲಿ ಬದುಕುವ ಎಲ್ಲಾ ಬದುಕಿನ ಸಮುದಾಯಗಳ ಕಥಾನಕಗಳನ್ನು ಕಥೆಯ ರೂಪದಲ್ಲಿ ಅಭಿವ್ಯಕ್ತಿಸತೊಡಗಿದರು. ಈ ಅಭಿವ್ಯಕ್ತಿ ವಿಧಾನವೂ ನವ್ಯ ಕಥಾ ಸಾಹಿತ್ಯದ ಮಾದರಿಯನ್ನು ಹೋಲುತ್ತಿರಲಿಲ್ಲ. ದಲಿತ-ಬಂಡಾಯ ಸಾಹಿತ್ಯ ಚಳುವಳಿಯ ಪ್ರಭಾವದಿಂದ

ರಚನೆಯಾಗುತ್ತಿದ್ದ ಕಥೆಗಳ ಅಭಿವ್ಯಕ್ತಿಗಳನ್ನು ಹೋಲುತ್ತಿರಲಿಲ್ಲ, ಅವರ ಕಥೆಗಳು ನವೋದಯ ಕಾಲದ ಕಥೆಗಳ ವಿಧಾನವನ್ನು ಹೋಲುವಂತೆ ಕಾಣುತ್ತವೆ. ಆದರೂ ಅವರ ಕಥೆಗಳಲ್ಲಿ ಅನುಭವ ಮುಖ್ಯವಾಗಿ ಸ್ವಂತಿಕೆಯನ್ನು ಮೈಗೂಡಿಸಿಕೊಂಡಿವೆ. ಇದನ್ನು ಶೋಧಿಸುವುದು ಮಹತ್ವದ್ದು ಎಂದು ಹೇಳಬಹುದು. ಯಾವ ಚಳುವಳಿಯ ಜೊತೆ ಗುರುತಿಸಿಕೊಳ್ಳದ ಇಂತಹ ಕಥೆಗಳನ್ನು ಕುರಿತು ಅಧ್ಯಯನ ಮಾಡುವುದು ಮಹತ್ವದ್ದೆಂದು ಕಾಣುತ್ತದೆ.

**ಅಧ್ಯಯನದ ವ್ಯಾಪ್ತಿ**

ಡಾ. ಕರೀಗೌಡ ಬೀಚನಹಳ್ಳಿ ಅವರು ಇದುವರೆಗೂ ಐದು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. 'ಕರಿಮಣ್ಣಿನ ಗೊಂಬೆಗಳು' (೧೯೮೩), 'ಸಂಧಾನ' (೧೯೮೭), 'ನೆನಪಲ್ಲ ವಾಸ್ತವ' (೧೯೯೧), 'ಕಡಲಮಂತು' (೧೯೯೫), 'ಹಕ್ಕಿ ಬೆಂದೊ ಹಕ್ಕಿ ಮರಿಬೆಂದೊ' (೨೦೦೪), ಈ ಐದು ಕಥಾ ಸಂಕಲನಗಳನ್ನು "ಬೀಚನಹಳ್ಳಿ ಅವರ ಎಲ್ಲ ಕಥೆಗಳು" (೨೦೦೭) ಎಂಬ ಶೀರ್ಷಿಕೆಯಡಿಯಲ್ಲಿ ಹೊರತರಲಾಗಿದೆ. 'ಒಂದು ಅಪೂರ್ವ ಸಂಸಾರ' ಕಥೆಯನ್ನು ೧೯೭೭ರಲ್ಲಿ ಪ್ರಾರಂಭಿಸಿ ಕೊನೆಯದಾಗಿ 'ಹಕ್ಕಿಬೆಂದೊ ಹಕ್ಕಿಮರಿ ಬೆಂದೊ' ಎಂಬ ಕಥೆಯನ್ನು ೨೦೦೪ರಲ್ಲಿ ಬರೆಯುವುದರ ಮೂಲಕ ಸುಮಾರು ೨೫ ವರ್ಷಗಳ ಕಾಲಾವಧಿಯಲ್ಲಿ ೩೮ ಕಥೆಗಳನ್ನು ರಚಿಸಿದ್ದಾರೆ. ಪ್ರಸ್ತುತ ನನ್ನ ನಿಬಂಧವು ಡಾ. ಕರೀಗೌಡ ಬೀಚನಹಳ್ಳಿ ಅವರ ೩೮ ಕಥೆಗಳನ್ನು ಒಳಗೊಂಡಿದೆ.

**ಅಧ್ಯಯನದ ವಿಧಾನ**

ಡಾ. ಕರೀಗೌಡ ಬೀಚನಹಳ್ಳಿ ಅವರ ಕಥೆಗಳು ಗ್ರಾಮೀಣ ಸಮುದಾಯಗಳ ಬದುಕಿನ ಬವಣೆಗಳನ್ನು ಅಭಿವ್ಯಕ್ತಿಸುತ್ತವೆ. ಹೀಗಾಗಿ ಈ ಕಥೆಗಳಲ್ಲಿ ಗ್ರಾಮೀಣ ಸಮಾಜದ ಸ್ವರೂಪವನ್ನು ತಿಳಿಯಲು ಬಿಡಿ ಬಿಡಿ ಕಥೆಗಳನ್ನು ಗಮನಿಸುವುದಕ್ಕಿಂತ ಒಟ್ಟು ಕಥಾ ಸಾಹಿತ್ಯದಲ್ಲಿ ಮನುಷ್ಯ ಸಂಬಂಧಗಳ ಸ್ವರೂಪ, ಕುಟುಂಬ ಸಂಬಂಧಗಳ ಸ್ವರೂಪ, ಗ್ರಾಮೀಣ ಸಂಪ್ರದಾಯಗಳು, ಶಿಕ್ಷಣ ಮತ್ತು ಬಡತನ, ಸಂಘರ್ಷದಿಂದ ಸಾಮರಸ್ಯದೆಡೆಗೆ ಹೀಗೆ ವಸ್ತುವಿನ ಮೇಲೆ ಗಮನ ಹರಿಸಿ ಅಧ್ಯಯನ ಮಾಡಲಾಗಿದೆ. ಇದು ಸಮಾಜ ಶಾಸ್ತ್ರೀಯ ಶಿಸ್ತೀಯ ನೆಲೆಯ ಅಧ್ಯಯನ ಎಂದು ಅನಿಸಿದರೂ, ಈಗ ಕನ್ನಡ ಸಾಹಿತ್ಯದಲ್ಲಿ ಅಂತರ್‌ಶಿಸ್ತೀಯ ಅಧ್ಯಯನಗಳು ಬೇಕಾದಷ್ಟು ಬೆಳೆದಿವೆ. ಬೆಳೆಯುತ್ತಲೂ ಇವೆ. ಈ ದೃಷ್ಟಿಯಿಂದ ಈ ಅಧ್ಯಯನದಲ್ಲಿ ಅಂತರ್‌ಶಿಸ್ತೀಯ ಅಧ್ಯಯನದ ಮಾದರಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಜೊತೆಗೆ ಕಥೆಗಳ ರೂಪ ಮತ್ತು ವಸ್ತುವನ್ನು ಕುರಿತು ಅವುಗಳ ಅಭಿವ್ಯಕ್ತಿ ವಿಧಾನಗಳನ್ನು ಕುರಿತು, ಅವುಗಳ ಸಾಹಿತ್ಯಿಕ ಗುಣವನ್ನು ಕುರಿತು, ವಿಶ್ಲೇಷಣೆ ಮಾಡಲಾಗಿದೆ. ಇಲ್ಲಿ ಸಮಾಜಶಾಸ್ತ್ರೀಯ ನೆಲೆ, ಸಾಂಸ್ಕೃತಿಕ ಅಧ್ಯಯನದ ನೆಲೆ ಜೊತೆಗೆ ಸಾಂಸ್ಕೃತಿಕ ನೆಲೆಯ ಅಧ್ಯಯನವನ್ನು ಮಾಡಲು ಪ್ರಯತ್ನಿಸಲಾಗಿದೆ.

* * *

# ಅಧ್ಯಾಯ ಎರಡು

# ಗ್ರಾಮ ಸಮಾಜದ ಪರಿಕಲ್ಪನಾತ್ಮಕ ಚರ್ಚೆ

೨.೧. ಗ್ರಾಮ ಸಮಾಜದ ಇತಿಹಾಸ–ಮಹತ್ವ

೨.೨. ಗ್ರಾಮಗಳ ಸ್ವರೂಪ

೨.೩. ಗ್ರಾಮಗಳಲ್ಲಿ ಶ್ರೇಣೀಕೃತ ವ್ಯವಸ್ಥೆ

೨.೪. ಗ್ರಾಮೀಣ ಸಂಪ್ರದಾಯಗಳು

# ಅಧ್ಯಾಯ ಎರಡು

# ಗ್ರಾಮ ಸಮಾಜದ ಪರಿಕಲ್ಪನಾತ್ಮಕ ಚರ್ಚೆ

ಸಮಾಜ ನಿತ್ಯ ಪರಿವರ್ತನಶೀಲವಾಗಿದ್ದು, ಅದರ ಬೆಳವಣಿಗೆಯಲ್ಲಿ ಅನೇಕ ಘಟ್ಟಗಳಿವೆ. ಪ್ರಚೀನ ಶೀಲಾಯುಗದಲ್ಲಿ ಮಾನವ ಆಹಾರಾನ್ವೇಷಣೆ ಮತ್ತು ಸಂಗ್ರಹಕ್ಕಾಗಿ ಒಂದೆಡೆಯಿಂದ ಮತ್ತೊಂದೆಡೆಗೆ ಅಲೆಯುತ್ತಾ, ಕಲ್ಲಿನ ಆಯುಧಗಳಿಂದ ಪ್ರಾಣಿಗಳನ್ನು ಕೊಂದು ಹಸಿಯ ಮಾಂಸವನ್ನು ಭಕ್ಷಿಸುತ್ತಿದ್ದ. ಅಲ್ಲಲ್ಲಿ ದೊರೆತ ಹಣ್ಣು-ಹಂಪಲು, ಗಡ್ಡೆ-ಗೆಣಸುಗಳನ್ನು ತಿಂದು ಗವಿಗಳಲ್ಲಿ, ಮರದ ಪೊಟರೆಗಳಲ್ಲಿ ವಾಸಿಸುತ್ತಿದ್ದ. ಈ ರೀತಿ ಎಷ್ಟೋ ಶತಮಾನಗಳ, ಅನಂತರ ಬೇಸಾಯ ಮಾಡುವುದನ್ನು ಕಲಿತ. ಇದಕ್ಕಾಗಿ ನೀರಿನ ಸೌಕರ್ಯವಿರುವ, ಫಲವತ್ತಾದ ಭೂಮಿಯಿರುವ ನದಿ ತೀರಪ್ರದೇಶಗಳಲ್ಲಿ ನೆಲಸಿದ. ಒಂದೆಡೆ ನೆಲಸಿದ್ದರಿಂದ ಸ್ಥಿರ ಜೀವನ ಅಗತ್ಯವಾಯಿತು. ಮಾನವ ಸಂಘ ಜೀವಿಯಾಗಿ ಕೃಷಿಯನ್ನೇ ಮುಖ್ಯ ಕಸಬನ್ನಾಗಿ ಮಾಡಿಕೊಂಡು, ಕೆಲವು ಕುಟುಂಬಗಳು ಒಂದೇ ಪ್ರದೇಶವನ್ನು ಆಕ್ರಮಿಸಿಕೊಂಡು ಸ್ಥಿರ ಜೀವನ ನಡೆಸಲಾರಂಭಿಸಿದಾಗ ಗ್ರಾಮಸಮಾಜ ಅದರಲ್ಲಿ ಸಮಾವೇಷಗೊಂಡಿರುವ ಎಲ್ಲ ಕುಟುಂಬಗಳ ರಕ್ಷಣೆಗಾಗಿ, ಪೋಷಣೆಗಾಗಿ ಏರ್ಪಟ್ಟ ಒಂದು ಸಮುದಾಯ. ಕುಟುಂಬ ಕೇವಲ ರಕ್ತ ಸಂಬಂಧದ ಆಧಾರದ ಮೇಲೆ ನಿಂತಿದೆ. ಆದರೆ ಗ್ರಾಮ ಕುಟುಂಬಗಳ ನಡುವೆ ರಕ್ತ ಸಂಬಂಧವಿರಬಹುದು, ಇಲ್ಲದಿರಬಹುದು. ಆದರೆ ಕುಟುಂಬದಂತೆ ಗ್ರಾಮವೂ ಸಹಬಾಳ್ವೆಯ ಮೂಲ ಸಿದ್ಧಾಂತದ ಮೇಲೆ ನಿಂತ ಸಂಸ್ಥೆ.

ಭಾರತದ ಗ್ರಾಮ ಸಮಾಜ ಬಹಳ ಹಿಂದಿನಿಂದಲೂ ನಡೆದು ಬಂದಿದೆ. ಭಾರತದಲ್ಲಿ ಶೇಕಡ ಎಂಬತ್ತು ಜನ ವ್ಯಯವಸಾಯ ವೃತ್ತಿಯನ್ನೇ ಅವಲಂಭಿಸಿದ್ದಾರೆ. ಆದ್ದರಿಂದ ಬಹುತೇಕ ಮಂದಿ ಗ್ರಾಮಗಳಲ್ಲಿ ವಾಸಿಸುತ್ತಾರೆ. ೨೦೦೧ರ ಜನಗಣತಿಯ ಪ್ರಕಾರ, ಭಾರತದಲ್ಲಿ ಇಂದು ೧೪೮೨೦ ಗ್ರಾಮಗಳಿವೆ. ಆದ್ದರಿಂದ ಭಾರತ ಮುಖ್ಯವಾಗಿ ಗ್ರಾಮಗಳ ನಾಡು ಎಂದು ಹೆಸರು ಪಡೆದಿದೆ. ಭಾರತದ ಗ್ರಾಮಸಮಾಜ "ಒಕ್ಕಲಿಗರ ಗುಂಪು" ಎಂದು "ಹೆಸ್ಸಿ ಮೇಯಿನ್" ಹೇಳಿದ್ದಾರೆ. ಫಲವತ್ತಾದ ಭೂಮಿ ಮತ್ತು ನೀರಿನ ಆಸರೆಗಳನ್ನು ಆಶ್ರಯಿಸಿ ನದೀ ಬಯಲು ಭೂಮಿಗಳಲ್ಲಿರುವ ಕೆಲವು ಗ್ರಾಮಗಳು ವ್ಯವಸಾಯವನ್ನು ಮುಖ್ಯ

ಕಸಬನ್ನಾಗಿ ಮಾಡಿಕೊಂಡಿವೆ. ಸಮುದ್ರ ತೀರ ಹಾಗೂ ಸರೋವರಗಳ ತಡಿಯಲ್ಲಿ ಬೆಸ್ತರ ಗ್ರಾಮಗಳು ಕಂಡುಬರುವುವು. ಭಾರತದ ಗ್ರಾಮಗಳು ಒಂದೇ ರೀತಿಯಾಗಿವೆ. ಎಂದು ಹೇಳವುದು ತಪ್ಪು. ಭಾರತದ ಪ್ರತಿಯೊಂದು ಗ್ರಾಮವೂ ಒಂದು ಪುಟ್ಟ ಪ್ರಪಂಚವಿದ್ದಂತೆ. ಭಾರತದ ಪ್ರತಿಯೊಂದು ಗ್ರಮಗಳ ಜೀವನ, ಕ್ರಮ, ಪದ್ಧತಿ, ಸಂಪ್ರದಾಯ ಮುಂತಾದವುಗಳಲ್ಲಿ ಭಿನ್ನತೆ ಕಂಡು ಬಂದರೂ ಕೆಲವು ಲಕ್ಷಣಗಳು ಹಾಗೂ ಸಮಸ್ಯೆಗಳು ಒಂದೇ ರೀತಿಯಾಗಿವೆ. ನಮ್ಮ ಗ್ರಾಮ ಜೀವನ ಆಗಿಂದಾಗ್ಗೆ ಅನೇಕ ಬದಲಾವಣೆಗಳಿಂದ ಪ್ರಭಾವಿತವಾಗಿದ್ದರೂ ಇಂದಿನವರೆಗೂ ವಿಶಿಷ್ಟವಾದ ಪ್ರಚೀನತೆಯನ್ನು ಉಳಿಸಿಕೊಂಡು ಬಂದಿದೆ.

ಭಾರತದ ಗ್ರಾಮಗಳ ವ್ಯಾಪ್ತಿ ಸಾಮಾನ್ಯವಾಗಿ ಕಿರಿದಾಗಿರುತ್ತದೆ. ಜನಸಾಂದ್ರತೆ ಅಷ್ಟಾಗಿರುವುದಿಲ್ಲ. ಆದರೆ ನಗರಗಳಂತೆ ಜನಜಂಗುಳಿ ಕಂಡುಬರುವುದಿಲ್ಲ. ಭಾರತವು ಕೃಷಿಪ್ರಧಾನವಾದ ದೇಶವಾಗಿದ್ದರಿಂದ ಒಕ್ಕಲುತನವೇ ಪ್ರಧಾನವಾದ ಉದ್ಯೋಗವಾಗಿದೆ. ಸಾಮಾನ್ಯವಾಗಿ ಗ್ರಾಮಗಳ ಸಮಾಜ–ಧರ್ಮ ಒಂದೇ ರೀತಿಯಾಗಿರುತ್ತದೆ. ಇತಿಹಾಸದ ಹಿನ್ನೆಲೆಯನ್ನು ಪರಿಶೀಲಿಸಿದರೆ ಕುಲ, ಗೋತ್ರ, ಕುಲಧರ್ಮಗಳ ವ್ಯವಸ್ಥೆ ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ. ಒಂದೇ ಕಸಬನ್ನು ಅವಲಂಬಿಸಿರುವವರು ಒಟ್ಟಿಗೆ ಸೇರುವುದು ಸಹಜ. ಒಂದು ಕುಟುಂಬದಲ್ಲಿನ ವ್ಯಕ್ತಿಗಳು ಒಟ್ಟು ಕುಟುಂಬದ ಹಿತಕ್ಕಾಗಿ ದುಡಿಯುವಂತೆ ಒಂದು ಗ್ರಾಮದ ಅನೇಕ ಕುಟುಂಬಗಳು ಗ್ರಾಮದ ಹಿತಕ್ಕಾಗಿ ದುಡಿಯುತ್ತವೆ. ಆದರೆ ಇಂದಿನ ದಿನಮಾನಗಳಲ್ಲಿ ಈ ರೀತಿಯಾಗಿ ಒಂದು ಗ್ರಾಮಕ್ಕಾಗಿ ದುಡಿಯುವ ಕುಟುಂಬಗಳು ಇಲ್ಲದಂತಾಗಿ ಸ್ವಾರ್ಥ, ದ್ವೇಷ, ಅಸೂಯೆ ತಾಂಡವಾಡುತ್ತಿವೆ. ಇದಕ್ಕೆ ಕಾರಣ ರಾಜಕೀಯ. ಪ್ರತಿಯೊಂದು ಕುಟುಂಬದ ಸದಸ್ಯರೂ ತಮ್ಮ ಶಕ್ತ್ಯನುಸಾರ ದುಡಿಯುತ್ತಾರೆ. ಇತ್ತೀಚಿನ ದಿನಗಳಲ್ಲಿ ಒಂದು ಕುಟುಂಬದಲ್ಲಿ ಒಬ್ಬ ಮಾತ್ರ ದುಡಿಯುವುದು ಐದು ಮಂದಿ ಕುಂತು ಕಾಲಹರಣ ಮಾಡುವುದು ಕಂಡು ಬರುತ್ತದೆ. ಗ್ರಾಮದ ಅವಶ್ಯಕತೆಗಳು ಬಹು ಪ್ರಕಾರವಾದುವು. ಅನ್ನ, ಬಟ್ಟೆ, ವಸತಿ, ಆಹಾರ ಪದಾರ್ಥಗಳನ್ನು ಬೆಳೆಯಲು ಜಮೀನು, ವ್ಯವಸಾಯಕ್ಕೆ ಮರಮುಟ್ಟುಗಳು, ಬಟ್ಟೆಗಾಗಿ ಸೆಣಬು, ಹತ್ತಿ, ನೇಯ್ಗೆ ಮಾಡಲು ಸಾಮಾನುಗಳು ಇವುಗಳನ್ನು ತಯಾರಿಸಲು ನೇಯ್ಗೆಯವರು, ಬಡಿಗ, ಕಮ್ಮಾರ, ಕುರಿ, ಕೋಳಿ ಸಾಕುವ ಜನ, ಮನೆ ಕಟ್ಟಲು ಇಟ್ಟಿಗೆ ಗಾರೆ ಕೆಲಸದವರು. ಹೀಗೆ ಅನೇಕ ಚಟುವಟಿಕೆಗಳಲ್ಲಿ ನಿರತರಾಗಿರುವ ಜನರ ವಾಸಸ್ಥಾನ ಗ್ರಾಮ. ಒಂದೇ ಗ್ರಾಮದಲ್ಲಿ ಅನೇಕ ಜಾತಿಯ ಜನರನ್ನು ಕಾಣಬಹುದು. ಸುಮಾರು ೧೫–೨೦ ವರ್ಷಗಳ ಹಿಂದಿನಿಂದ ಅವರೆಲ್ಲರೂ ಸಹಕಾರ ಜೀವನ ನಡೆಸುತ್ತಿದ್ದರು ಎಂದು ಹೇಳಿದರೂ ಇತ್ತೀಚಿನ ಹಳ್ಳಿಗರ ವ್ಯವಸ್ಥೆಯು ಶೋಚನಿಯವಾದಂತ ಘಟ್ಟವನ್ನು ತಲುಪುತ್ತಾ ಬಂದಿದೆ. ಹಳ್ಳಿಗಳಲ್ಲಿ ಜಾತಿ ರಾಜಕೀಯ ಶುರುವಾಗಿದೆ. ಜಾತಿ ಆಧಾರದ ಮೇಲೆ ರಾಜಕೀಯ ಸೌಲಭ್ಯಗಳನ್ನು ಪಡೆದುಕೊಳ್ಳಲು

ಪ್ರಯತ್ನಿಸುತ್ತಿದ್ದಾರೆ. ಜಾತಿ-ಜಾತಿಗಳ ನಡುವೆ, ಗ್ರಾಮ-ಗ್ರಾಮಗಳ ನಡುವೆ ಕೋಮು ಗಲಭೆಗಳು ಪ್ರಾರಂಭವಾಗಿದೆ.

## ೨.೧ ಗ್ರಾಮೀಣ ಸಮಾಜದ ಅಧ್ಯಯನ ಮತ್ತು ಮಹತ್ವ

ಒಂದು ದೃಷ್ಟಿಯಲ್ಲಿ ಭಾರತದಲ್ಲಿ ಪ್ರಸ್ತುತ ರೈತನ ಸ್ಥಿತಿ ಬಹಳ ಗಂಡಾಂತರಕಾರಿಯಾಗಿದೆ. ದೇಶದ ಬೆನ್ನಲುಬು , ಅನ್ನದಾತ, ನೇಗಿಲಯೋಗಿ ಎಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದ ರೈತ ಇಂದು ಸಾಲದ ಶೂಲದಿಂದ ನರಳುತ್ತಿದ್ದು ಆತ್ಮಹತ್ಯೆಯ ಹಾದಿ ಹಿಡಿದ್ದಿದ್ದಾನೆ. ಅಂತಯೇ ಅವನ ಬಗ್ಗೆ ಈಗಲಾದರೂ ಗಮನ ಹರಿಸಬೇಕಾಗಿದೆ. ಭಾರತೀಯ ಗ್ರಾಮೀಣ ಸಮಾಜದ ವೈಜ್ಞಾನಿಕವಾದ ಹಾಗೂ ಸುವ್ಯವಸ್ಥಿತವಾದ ಅಧ್ಯಯನವು ತುರ್ತು ಅಗತ್ಯವಾಗಿರುವುದು. ಅವರ ಆರ್ಥಿಕ ಅಡಿಪಾಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂರಚನೆ, ಅದರ ಸಂಘ ಸಂಸ್ಥೆಗಳು ಮತ್ತು ಅವುಗಳ ಕಾರ್ಯಗಳು, ಅವು ತೀವ್ರಗತಿಯಲ್ಲಿ ಪರಿವರ್ತನೆಗೊಳ್ಳುವ ಹಾದಿಯಲ್ಲಿರುವಾಗ ಆಗುತ್ತಿರುವ ಗಣನೀಯ ಬದಲಾವಣೆಗಳು ಮತ್ತು ಆ ನಿಟ್ಟಿನಲ್ಲಿನ ಪ್ರಕ್ರಿಯೆಗಳು ಇವೇ ಮೊದಲಾದವುಗಳನ್ನು ಕುರಿತಂತೆ ಶಾಸ್ತ್ರೀಯ ಅಧ್ಯಯನ ಆಗಬೇಕಾಗಿರುವುದು. ಆರ್ಥಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ ಗ್ರಾಮವು ಸತತ ಪರಿವರ್ತನೆ ಒಳಗಾಯಿತು. ಗ್ರಾಮ ಆರ್ಥಿಕತೆಯು ರಾಷ್ಟ್ರೀಯ ಆರ್ಥಿಕತೆ ಹಾಗೂ ಜಾಗತಿಕ ಆರ್ಥಿಕತೆಯ ಒಂದು ಅವಿಭಾಜ್ಯ ಅಂಗವಾಗಿ ಬೆಳೆಯತೊಡಗಿತು. ವಿದೇಶಿ ನೆರವು ಮಾರ್ಗದರ್ಶನ ಮೊದಲಾದವುಗಳ ಪ್ರಭಾವದಿಂದ ಗ್ರಾಮೀಣ ಗುಡಿ ಕೈಗಾರಿಕೆಗಳು ಕ್ಷೀಣಿಸತೊಡಗಿದವು. ಸಾಮಾಜಿಕ ಕ್ಷೇತ್ರದಲ್ಲಿ ಅವಿಭಕ್ತ ಕುಟುಂಬ, ಜಾತಿ ಪದ್ಧತಿ, ಗ್ರಾಮ ಪಂಚಾಯತಿ ಮೊದಲಾದವುಗಳ ವತಿಯಿಂದ ನಿರ್ದೇಶಿತವಾದ ಕಟ್ಟುಪಾಡುಗಳು ತಪ್ಪಿ, ಭಾರತದಲ್ಲಿನ ಕೇಂದ್ರೀಕೃತ ಬ್ರಿಟಿಷ್ ಆಡಳಿತ ಪದ್ಧತಿಯ ಪ್ರಭಾವ ಎಲ್ಲೆಲ್ಲಿಯೂ ಗೋಚರಿಸತೊಡಗಿತು. ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರ ಮೊದಲಾದ ಗ್ರಾಮ ಜೀವನದ ಪ್ರತಿಯೊಂದು ಕ್ಷೇತ್ರದ ಪ್ರತಿಯೊಂದು ಅಂಶವೂ ಸಹ ಸತತ ವರ್ಗಾವಣೆಗೆ ಗುರಿಯಾಗತೊಡಗಿತು. ಗ್ರಾಮ ಜೀವನದ ಹಳೆಯ ನಮೂನೆ, ಹಳೆಯ ಸಂರಚನೆಯು ತಪ್ಪಿ ನಿರಂತರ ಬದಲಾವಣೆಯು ಗೋಚರಿಸುವುದು ಕಂಡು ಬಂದಿತು.

ಮಕಿಮ್ ಮೇರಿಯಟ್‌ರವರು ತಮ್ಮ "ಎಕಾನಾಮಿಕ್ ಡೆವೆಲಪ್‌ಮೆಂಟ್ ಅಂಡ್ ಕಲ್ಚರಲ್ ಛಂಜ್" ಎಂಬ ಕೃತಿಯಲ್ಲಿ ತಮ್ಮ ಅಧ್ಯಯನದ ಮೂಲಕ ತಿಳಿಸಿರುವಂತೆ ಉತ್ತರ ಪ್ರದೇಶ ರಾಜ್ಯದಲ್ಲಿನ ಕಿಶನ್‌ಗರಿ ಎಂಬ ಗ್ರಾಮದಲ್ಲಿ ಜನರು ಎಲ್ಲ ಬದಲಾವಣೆಳಿಗೂ ವಿರೋಧವನ್ನು ವ್ಯಕ್ತಪಡಿಸುತ್ತಿರಲಿಲ್ಲ. ಅದಕ್ಕೆ ಬದಲು ಬಹುತೇಕ ನೂತನ ಬೆಳೆಗಳು ಹಾಗೂ ಹೊಸ ತಂತ್ರಜ್ಞಾನವನ್ನು ಸ್ವಾಗತಿಸುತ್ತಿದ್ದರು. ಕೃಷಿಕರ ತಾಂತ್ರಿಕಜ್ಞಾನದ ಬದಲಾವಣೆಯು ಸರಳವಾಗಿರುವುದಿಲ್ಲ. ಬದಲಿಗೆ ತುಂಬಾ ಸಂಕೀರ್ಣವಾಗಿರುತ್ತದೆ. ತಾಂತ್ರಿಕ ವ್ಯವಸ್ಥೆಯು ಆರ್ಥಿಕ, ಸಾಮಾಜಿಕ,

ಧಾರ್ಮಿಕ ಮೊದಲಾದ ವ್ಯವಸ್ಥೆಗಳ ಜೊತೆ ನಿಕಟ ಸಂಬಂಧವುಳ್ಳದ್ದಾಗಿರುತ್ತದೆ. ಒಂದು ವೇಳೆ ಕೃಷಿಕನು ಬದಲಾವಣೆಯನ್ನು ವಿರೋಧಿಸುವುದಾದರೆ ಆ ಬಗೆಯ ಅಂಶಗಳ ಕಾರಣಗಳಿಂದಾಗಿಯೂ ವಿರೋಧಿಸಬಹುದಾಗಿರುತ್ತದೆ. ಕೃಷಿಕರ ಆರ್ಥಿಕತೆಯು ಹಲವಾರು ತೊಂದರೆಗಳಿಂದ ಕೂಡಿರುತ್ತದೆ. ಆತನಿಗೆ ಒಂದು ಇದ್ದರೆ ಅನೇಕವೂ ಇರುವುದಿಲ್ಲ. ಒಂದು ವರ್ಷ ಸುಭಿಕ್ಷ ಕಂಡುಬಂದರೆ ಮತ್ತೊಂದು ವರ್ಷ ದುರ್ಭಿಕ್ಷೆ ತಲೆದೋರಬಹುದಾಗಿರುತ್ತದೆ. ಹೊಟ್ಟೆಗಿದ್ದರೆ ಬಟ್ಟೆಗಿಲ್ಲ ಬಟ್ಟೆಗಿದ್ದರೆ ಹೊಟ್ಟೆಗಿಲ್ಲ ಎಂಬಂತೆ ಪರಿಸ್ಥಿತಿ ಇರುತ್ತದೆ. ಅವರಲ್ಲಿ ಬಹುತೇಕ ಮಂದಿ ಸಾಲವೆಂಬ ಶೂಲದ ಬಾಧೆಯಿಂದ ತತ್ತರಿಸುತ್ತಿರುತ್ತಾರೆ. ಬಿತ್ತನೆ ಕಳೆ ಕೀಳುವ ಸಮಯಗಳಲ್ಲಿ ಕೂಲಿ ಕೊಡಲು, ಗೊಬ್ಬರಕ್ಕೆ ಹಣವನ್ನು ಒದಗಿಸಲು ಪರದಾಡುವುದು ಸಾಮಾನ್ಯ ಸಂಗತಿಯಾಗಿರುತ್ತದೆ. ವಿವಿಧ ಕೃಷಿ ಪ್ರಕ್ರಿಯೆಗಳ ಸಂದರ್ಭಗಳಲ್ಲಿ ರಣಹದ್ದುಗಳು ಕಾಯ್ದುಕೊಂಡಿರುವಂತೆ ಕಂಡುಬರುವ ಬಡ್ಡಿ, ಚಕ್ರಬಡ್ಡಿ, ಸುಸ್ತಿನ ಬಡ್ಡಿಗೆ ಹಣ ಕೊಟ್ಟು ಕಡಿಮೆ ಅವಧಿಯಲ್ಲಿ ಹೆಚ್ಚು ಲಾಭ ಸಂಪಾದಿಸುವ ಲೇವಾದೇವಿಗಾರರ ಕಾಟ ಪರಿಪರಿಯಾಗಿ ಕಾಡುತ್ತದೆ. ಅವರು ಅಮಾಯಕ, ಮುಗ್ಧ, ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಜನರ ಮೌಢ್ಯ ಹಾಗೂ ಬಡತನವನ್ನು ಬಂಡವಾಳ ಮಾಡಿಕೊಂಡು ಅಪಾರವಾಗಿ ಶೋಷಣೆ ಮಾಡುತ್ತಾರೆ.

ಕೆಲವು ಕೃಷಿಕರು ಸಗಣಿಯಿಂದಾದ ಬೆರಣಿಯನ್ನು ಉರುವಲಾಗಿ ಉಪಯೋಗಿಸುತ್ತಾರೆ. ಅದಕ್ಕೆ ಮುಖ್ಯ ಕಾರಣಗಳು ಎರಡು ಅವುಗಳೆಂದರೆ ೧. ಅವುಗಳಿಂದಾಗುವ ಉತ್ಕೃಷ್ಟ ಗೊಬ್ಬರದ ಬೆಲೆ ಗೊತ್ತಿಲ್ಲದಿರುವುದು ಮತ್ತು ೨. ಇತರ ಉರುವಲು ಅಷ್ಟು ಸುಲಭವಾಗಿ ಸಿಗದಿರುವುದು ರೈತನ ನೇಗಿಲು ತುಂಬಾ ಚಿಕ್ಕದಾದುದೂ ಮರದಿಂದ ಮಾಡಿದುದೂ ಆಗಿರುತ್ತದೆ. ಆ ಕಾರಣದಿಂದಗಿಯೇ ಅವರಿಗೆ ಚಿಕ್ಕ ಗಾತ್ರದ ಎತ್ತುಗಳಿದ್ದರೂ ಉಳುಮೆ ಸಾಧ್ಯವಾಗುತ್ತದೆ. ಅವರು ತಮಗೆ ಬರುವ ಆದಾಯದ ಬಹುತೇಕ ಭಾಗವನ್ನು ವಿವಾಹ, ಹಬ್ಬ, ತಿಥಿ ಮೊದಲಾದವುಗಳಿಗೆ ಖರ್ಚು ಮಾಡುತ್ತಾರೆ. ಇಲ್ಲವಾದರೆ ತಮ್ಮ ಸಂಬಂಧಿಕರು, ಮಿತ್ರರು, ನೆರೆಹೊರೆಯವರ ಮುಂದೆ ತಲೆ ತಗ್ಗಿಸಿದಂತಾಗುತ್ತದೆ ಎಂಬುದಾಗಿ ಭ್ರಮೆ ಪಡುತ್ತಾರೆ. ಹಾಸಿಗೆ ಇದ್ದಷ್ಟು ಕಾಲು ಚಾಚುವ ಸ್ವಭಾವ ಅವರಿಗೆ ಇನ್ನೂ ಕರಗತವಾಗಬೇಕಾಗಿದೆ. ಅವರು ಪೊಳ್ಳು ಪ್ರತಿಷ್ಠೆಯ ಕಡೆ ಗಮನ ಕೊಡುತ್ತಿರುವರೇ ಸೂಕ್ತ ರೀತಿಯಲ್ಲಿ ಸಾಗಿಸಲು ಇನ್ನೂ ಮನೋ ಸಿದ್ಧತೆ ಮಾಡಿಕೊಂಡಿರುವಂತೆ ಕಂಡುಬರುತ್ತಿಲ್ಲ. ಪರಂಪರಾಗತವಾಗಿ ಬಂದ ಸಂಪ್ರದಾಯಗಳು ಹಾಗೂ ಲೋಕಾಚಾರಗಳ ಕಡೆಯೇ ಅವರ ಗಮನವಿರುತ್ತದೆ.

ಹೊಸ ಆಲೋಚನೆ, ಅರ್ಥಪೂರ್ಣ ವಿಚಾರವಂತಿಕೆಯು ನಡವಳಿಕೆಯ ಕಡೆ ಮನಸ್ಸು ಮಾಡುವುದು ಏನೇನೂ ಸಾಲದು, ಇತರರ ಮೇಲೆ ಅವನು ಹೆಚ್ಚು ಹೆಚ್ಚು ಅವಲಂಬಿಸಿದಷ್ಟು ಅವನು ದುಸ್ಥಿತಿಯಲ್ಲಿಯೇ ಇರುವುದು ಪ್ರಬಲವಾಗಿರುತ್ತದೆ. ಗ್ರಾಮೀಣ ಜನರ ನಡವಳಿಕೆಗಳಲ್ಲಿ ಇನ್ನೂ ಮನುಸ್ಮೃತಿ ಅಥವಾ ಮನುಧರ್ಮಶಾಸ್ತ್ರ ಆಧಾರಿತ ಜಾತಿ ಪದ್ಧತಿಯ ಕಲುಷಿತ

ಕಟ್ಟುಪಾಡುಗಳಿಂದೊಡಗೂಡಿದ ಅಂಶಗಳಿರುವುದನ್ನು ಗುರುತಿಸಬಹುದಾಗಿರುತ್ತದೆ. ಧರ್ಮ ಆಧಾರಿತ ನೀತಿ ನಿಯಮಗಳು ಇನ್ನೂ ಸ್ಥಾನ ಪಡೆದಿರುವುವು.

**೨.೧. ಗ್ರಾಮದ ಇತಿಹಾಸ:**

ಮಾನವ ಜೀವನದ ವಿಕಾಸದಲ್ಲಿ ಗ್ರಾಮಕ್ಕೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ಸಾಮಾಜಿಕ ಜೀವನದ ಗ್ರಾಮೀಣ ಮತ್ತು ನಗರ ಸಮುದಾಯಗಳ ನಡುವಿನ ಪ್ರಮುಖ ಲಕ್ಷಣಗಳ ವ್ಯಾತ್ಯಾಸಗಳನ್ನು ಸುಲಭವಾಗಿ ಗುರುತಿಸಬಹುದಾಗಿದೆ. ಸಮೀಕ್ಷೆ ಮಾಡಬಹುದಾಗಿದೆ. ಆನಂತರ ಗ್ರಾಮೀಣ ಸಮಾಜದ ಸಂರಚನೆಯನ್ನು ತಿಳಿಯುವುದು ಸೂಕ್ತವಾದುದಾಗಿದೆ. ಏಕೆಂದರೆ ಗ್ರಾಮೀಣ ಸಮಾಜದಲ್ಲಿ ಗ್ರಾಮಕ್ಕೆ ತನ್ನದೇ ಆದ ಮಹತ್ವವಿದೆ. ವಿಶ್ವದ ಪ್ರತಿಯೊಂದು ಗ್ರಾಮವೂ ಸಹ ಗ್ರಾಮೀಣ ಜೀವನದ ಇಡೀ ನಾಟಕವು ವಾಸ್ತವತೆಯ ಆಧಾರದ ಮೇಲೆ ಬಿಚ್ಚಿಕೊಳ್ಳುವ ಅರ್ಥಾತ್ ಪ್ರದರ್ಶಿತವಾಗುವ ತಾಣವಾಗಿರುವುದು, ಗ್ರಾಮವು ಇಡೀ ಗ್ರಾಮೀಣ ಸಮಾಜದ ಪಡಿಯಚ್ಚಾಗಿರುವುದು.

ಗ್ರಾಮವು ಗ್ರಾಮೀಣ ಸಮಾಜದ ಘಟಕ. ಅದು ಗ್ರಾಮೀಣ ಜೀವನದ ತನ್ನಷ್ಟಕ್ಕೆ ತಾನೇ ಬಿಚ್ಚಿಕೊಳ್ಳುವ ಮತ್ತು ಕಾರ್ಯನಿರ್ವಹಿಸುವ ಚಿತ್ರಮಂದಿರವಾಗಿದೆ. ಪ್ರತಿಯೊಂದು ಸಾಮಾಜಕ್ಕೆ ವಿದ್ಯಮಾನದಂತೆ, ಗ್ರಾಮವು ಒಂದು ಐತಿಹಾಸಿಕ ವಿಭಾಗವಾಗಿದೆ. ಮನುಕುಲದ ಜೀವನದ ಇತಿಹಾಸದಲ್ಲಿ ಗ್ರಾಮ ಅಸ್ತಿತ್ವಗೊಂಡಿರುವ ಹಂತ ಅದರ ಉಗಮ, ಮಾನವ ಇತಿಹಾಸದ ವಿವಿಧ ಕಾಲಾವಧಿಯಲ್ಲಿ ಅದು ಬೆಳವಣಿಗೆ ಹಾಗೂ ಅಭಿವೃದ್ಧಿ ಹೊಂದಿರುವ ಬಗೆಗಳು, ಅದರ ಅಸ್ತಿತ್ವ ಸಹಸ್ರಾರು ವರ್ಷಗಳ ಅವಧಿಯಲ್ಲಿ ಅದರ ಸಂರಚನೆಯಲ್ಲಿ ಆಗಿರುವ ಗುರುತರವಾದ ಪರಿವರ್ತನೆಗಳು, ಔದ್ಯೋಗಿಕ ಕ್ರಾಂತಿಯಿಂದೀಚಿನ ವರ್ಷಗಳಲ್ಲಿ ಅದು ಕಂಡು ಕೊಂಡಿರುವುದಾದ ವರ್ಗಾವಣೆಗಳು ಇವೇ ಮೊದಲಾದವು ಬಹಳವಾಗಿ ಗಮನ ಸೆಳೆಯುವ ಹಾಗೂ ಸವಾಲಿನೋಪಾದಿಯ ಅಧ್ಯಯನದ ಭಾಗಗಳಾಗಿರುವುವು.

**೨.೧. ಗ್ರಾಮಗಳ ವಿಧಗಳು:**

ಇಂದು ಜಗತ್ತಿನಾದ್ಯಂತ ಕಂಡುಬರುತ್ತಿರುವ ಗ್ರಾಮೀಣ ಸಮುದಾಯಗಳ ಅಥವಾ ಗ್ರಾಮಗಳು ಒಂದೇ ವಿಧದಲ್ಲಿ ಅಥವಾ ಬಗೆಗಳಲ್ಲಿ ಇಲ್ಲ. ಅವು ಕೆಲವಾರು ಪ್ರಕಾರಗಳಲ್ಲಿ ಗೋಚರಿಸುತ್ತಿವೆ. ಅಂತೆಯೇ ಸಮಾಜಶಾಸ್ತ್ರಜ್ಞರು ಗ್ರಾಮಗಳನ್ನು ಕೆಲವಾರು ನಿಗದಿತ ಪ್ರಮಾಣಗಳ ಆಧಾರದ ಮೇಲೆ ವರ್ಗೀಕರಿಸಲು ಪ್ರಯತ್ನಿಸಿದ್ದಾರೆ. ಅಂತಹ ಒಂದು ಪ್ರಮಾಣವನ್ನು ಆಧರಿಸಿ ಗ್ರಾಮಗಳನ್ನು ಮೂರು ವಿಧಗಳಾಗಿ ವರ್ಗೀಕರಿಸಬಹುದಾಗಿದೆ.

೧. ವಲಸೆ ವ್ಯವಸಾಯ ಗ್ರಾಮಗಳು

೨. ಅರೆ-ಶಾಶ್ವತ ವ್ಯವಸಾಯ ಗ್ರಾಮಗಳು

೩. ಶಾಶ್ವತ ವ್ಯವಸಾಯ ಗ್ರಾಮಗಳು

ವಲಸೆ ವ್ಯವಸಾಯ ಗ್ರಾಮಗಳಲ್ಲಿ ಜನರು ನಿಗದಿತ ಮನೆಗಳಲ್ಲಿ ವರ್ಷದಲ್ಲಿ ಕೆಲವೇ ತಿಂಗಳಗಳಲ್ಲಿ ಮಾತ್ರ ವಾಸಿಸುತ್ತಾರೆ. ಅರೆ-ಶಾಶ್ವತ ವ್ಯವಸಾಯ ಗ್ರಾಮಗಳಲ್ಲಿ ಜನರು ನಿಗದಿತ ಮನೆಗಳಲ್ಲಿ ಕೆಲವೇ ವರ್ಷಗಳು ಮಾತ್ರ ವಾಸವಾಗಿದ್ದು ಅಲ್ಲಿಯ ಮಣ್ಣು ವ್ಯವಸಾಯದ ದೃಷ್ಟಿಯಿಂದ ನಿತ್ರಾಣವಾಯಿತು ಎನಸಿದಾಗ ಮುಂದೆ ವಲಸೆ ಹೋಗುವರು.

ಶಾಶ್ವತ ವ್ಯವಸಾಯ ಗ್ರಾಮಗಳಲ್ಲಿ ಜನರು ಪೀಳಿಗೆಯಿಂದ-ಪೀಳಿಗೆಗೆ ಶತಮಾನಗಳವರೆಗೆ ನಿಗದಿತ ವಾಸಸ್ಥಾನಗಳಲ್ಲಿಯೇ ವಾಸಿಸುವರು.

ಮತ್ತೊಂದು ಪ್ರಮಾಣದ ಪ್ರಕಾರ ಗ್ರಾಮಗಳನ್ನು ಪ್ರಮುಖವಾಗಿ ಕೇವಲ ಎರಡು ವಿಧಗಳಾಗಿ ವರ್ಗೀಕರಿಸಬಹುದಾಗಿದೆ. ಅವುಗಳೆಂದರೆ

೧. ಕೇಂದ್ರೀಕೃತ ಗ್ರಾಮಗಳು

೨. ಚದುರಿದ ಗ್ರಾಮಗಳು

ವಾಸಸ್ಥಾನವು ಒಂದೇ ಕಡೆ ಇರುವ ಮತ್ತು ಮನೆಗಳೆಲ್ಲಾ ಒಂದೇ ಕಡೆ ಕೇಂದ್ರೀಕೃತವಾಗಿರುವ ಗ್ರಾಮಗಳನ್ನು 'ಕೇಂದ್ರೀಕೃತ ಗ್ರಾಮ'ಗಳೆಂದು ಎನ್ನುತ್ತೇವೆ. ಕೇಂದ್ರೀಕೃತ ಗ್ರಾಮಗಳು ಅಥವಾ ಒಗ್ಗೂಡಿದ ಗ್ರಾಮಗಳಲ್ಲಿ ವಾಸದ ಮನೆಗಳು ತುಂಬಾ ಹತ್ತಿರ-ಹತ್ತಿರ ಇರುತ್ತವೆ. ಮನೆಗಳನ್ನು ನಿಶ್ಚಿತ ಭೂಪ್ರದೇಶದ ವ್ಯಾಪ್ತಿಯ ಒಳಗೇ ಒತ್ತು-ಒತ್ತಾಗಿ ನಿರ್ಮಿಸಲಾಗಿರುತ್ತದೆ. ಜನ, ಜಾನುವಾರು ಮತ್ತು ವಾಹನಗಳು ತಿರುಗಾಡಲು ಬೀದಿಗಳು ಇರುವುದಾದರೂ ತುಂಬಾ ಇಕ್ಕಟ್ಟಾಗಿರುವುದೇ ಹೆಚ್ಚು. ಮನೆಗಳ ಸಂಖ್ಯೆ ಇಂತಿಷ್ಟೇ ಇರಬೇಕೆಂಬ ನಿಯಮವಿಲ್ಲದಿದ್ದರೂ ಸಂಖ್ಯೆಯು ನಿಗದಿತ ಗ್ರಾಮದ ಗಾತ್ರ, ವಿಸ್ತೀರ್ಣ ಹಾಗೂ ಜನಸಂಖ್ಯೆಯನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಗ್ರಾಮದ ಮನೆಗಳು ಹಾಗೂ ನಿವೇಶನಗಳು ಜಾಗದ ಹೊರಗಡೆ ಸುತ್ತಲೂ ಸಾಮಾನ್ಯವಾಗಿ ವ್ಯವಸಾಯ ಯೋಗ್ಯವಾದ ವಿಶಾಲವಾದ ಭೂಭಾಗವಿರುತ್ತದೆ.

ಜನರು ಮುಂಜಾನೆಯಿಂದ ಸಂಜೆಯವರೆಗೆ ತಮ್ಮ ಹೊಲ, ಗದ್ದೆ ಹಾಗೂ ತೋಟಗಳಲ್ಲಿ ಸತತವಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ. ಜಗತ್ತಿನ ಹಲವಾರು ಕಡೆ ಅದರಲ್ಲಿಯೂ ಭಾರತದ ಮೈದಾನ ಪ್ರದೇಶಗಳಲ್ಲಿ ಇಂತಹ ಕೇಂದ್ರೀಕೃತ ಗ್ರಾಮಗಳಲ್ಲಿ ಕಾಣಬಹುದಾಗಿದೆ. ವಾಸಸ್ಥಾನವು ಒಂದೇ ಕಡೆ ಇಲ್ಲದ ಮತ್ತು ಮನೆಗಳೆಲ್ಲ ಅವರವರ ವ್ಯವಸಾಯದ ಜಮೀನಿನ ಒಳಗಡೆ ಚದುರಿ ಹೋಗಿರುವ ಗ್ರಾಮಗಳನ್ನು 'ಚದುರಿದ ಗ್ರಾಮಗಳು' ಎಂದು ಕರೆಯುತ್ತೇವೆ. ಚದುರಿದ ಗ್ರಾಮಗಳು ತಮ್ಮ ಸ್ವರೂಪದಲ್ಲಿ ಕೇಂದ್ರೀಕೃತ ಗ್ರಾಮಗಳಿಗಿಂತ ಬಹಳವಾಗಿ ಭಿನ್ನವಾಗಿರುತ್ತವೆ. ಚದುರಿದ ಗ್ರಾಮಗಳಲ್ಲಿ ಜನರ ಕುಟುಂಬಗಳು ತಮ್ಮ-ತಮ್ಮ ವ್ಯವಸಾಯದ ಜಮೀನಿನ ಒಳಗಡೆಯೇ ನಿರ್ಮಿಸಲ್ಪಟ್ಟಿರುವ ವಾಸಗೃಹಗಳಲ್ಲಿ ವಾಸಿಸುವ ಏರ್ಪಾಟಿರುತ್ತದೆ. ಒಂದು ಕುಟುಂಬಕ್ಕೆ ಸೇರಿದ ವ್ಯವಸಾಯ ಜಮೀನು ಸುತ್ತಲೂ ಇರುತ್ತದೆ. ಜಗತ್ತಿನ ಹಲವಾರು ಕಡೆ ಅದರಲ್ಲಿಯೂ ಭಾರತದ ಕರ್ನಾಟಕದ ಮಲೆನಾಡು ಪ್ರದೇಶದಲ್ಲಿ 'ಕೊಡಗು ಪ್ರಾಂತ್ಯ'ದಲ್ಲಿ, ಕೇರಳದ ಮಲಬಾರ್ ಪ್ರಾಂತ್ಯದಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಚದುರಿದ ಗ್ರಾಮಗಳನ್ನು ಕಾಣಬಹುದಾಗಿದೆ.

## ೨.೨. ಗ್ರಾಮಗಳ ಸ್ವರೂಪ

### ೨.೨.೧. ಗ್ರಾಮದ ಮನೆಗಳು:

ಗ್ರಾಮಗಳಲ್ಲಿ ಮನೆಗಳು ಭಿನ್ನತೆಯಿಂದ ಕೂಡಿರುತ್ತವೆ. ಆಯಾ ಮನೆಗಳು ಅವರವರ ನಿಜ ಸ್ಥಿತಿಯನ್ನು ತೋರಿಸಿಕೊಡುವಂತಿರುತ್ತವೆ. ಅಂದರೆ ಉಳ್ಳವರ ಮನೆಗೂ ಇಲ್ಲದವರ ಮನೆಗೂ ತುಂಬಾ ವ್ಯತ್ಯಾಸಗಳನ್ನು ಕಾಣಬಹುದು. ಗ್ರಾಮಗಳಲ್ಲಿ ಸಹಜವಾಗಿ ಆಯಾ ಜಾತಿಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಒಂದೇ ಕಡೆಯಲ್ಲಿರುತ್ತವೆ. ಉದಾಹರಣೆಗೆ ಮಾದಿಗರ (ಆದಿ ಕರ್ನಾಟಕ) ಮನೆಗಳು ಊರಿನ ಬಲ ಮೂಲೆಯ ಕೊನೆಯಲ್ಲಿ ಕಟ್ಟಿ ಕೊಂಡಿರುತ್ತಾರೆ. ಈಗಿರುವ ಆಧುನಿಕ ಯುಗದಲ್ಲಿಯು ಸಹ ಇಂತಹ ಪದ್ಧತಿ ಇರುವುದನ್ನು ಗ್ರಾಮಗಳಲ್ಲಿ ಕಾಣಬಹುದು. ಉಳಿದ ಬೇರೆ ಬೇರೆ ಜಾತಿಯ ಮನೆಗಳು ಪ್ರತಿಯೊಂದು ಸೌಲಭ್ಯಗಳನ್ನು ಒಳಗೊಂಡು ಊರಿನ ನಡುವೆ ಇರುತ್ತವೆ. (ಗೌಡ, ಶಾನುಭೋಗ)

ಗ್ರಾಮಗಳಲ್ಲಿ ಲಭ್ಯವಿರುವ ಮನೆಗಳನ್ನು ಮೂರು ಪ್ರಮುಖ ಪ್ರಕಾರಗಳಲ್ಲಿ ವಿಂಗಡಿಸಬಹುದಾಗಿದೆ. ಅವುಗಳೆಂದರೆ

೧. ಉತ್ತಮ ಗುಣಮಟ್ಟದ ಗ್ರಾಮಗಳು

೨. ಮಧ್ಯಮ ಗುಣಮಟ್ಟದ ಗ್ರಾಮಗಳು

೩. ಕಳಪೆ ಗುಣಮಟ್ಟದ ಗ್ರಾಮಗಳು

### ೧. ಉತ್ತಮ ಗುಣಮಟ್ಟದ ಗ್ರಾಮಗಳು:

ಈ ಮನೆಗಳನ್ನು ಇಟ್ಟಿಗೆಯ ಗೂಡು ಅಥವಾ ಭಟ್ಟಿಯಲ್ಲಿ ಸುಟ್ಟ ಇಟ್ಟಿಗೆಗಳಿಂದ ಕಟ್ಟಲಾಗಿರುತ್ತವೆ. ಇಲ್ಲಿ ಒಂದೇ ಮೇಲ್ಛಾವಣಿ ಇದ್ದು ಅದರ ಅಡಿಯಲ್ಲೇ ಮನುಷ್ಯರಿಗೆ ಮತ್ತು ಪ್ರಾಣಿಗಳಿಗೆ ಪ್ರತ್ಯೇಕ ವಸತಿಗಳು ಏರ್ಪಟ್ಟಿರುತ್ತವೆ. ಆದಾಗ್ಯು ಕೆಲವು ಮನೆಗಳಲ್ಲಿ ಕೆಲವು ವ್ಯಕ್ತಿಗಳು ದನಕರುಗಳನ್ನು ಕಟ್ಟಿಹಾಕಿರುವ ದೊಡ್ಡ ಪ್ರಮಾಣದ ಕೊಠಡಿ ಇಲ್ಲವೇ ಅಂಗಳದಲ್ಲಿಯೇ ಮಲಗಿಕೊಳ್ಳುವ ಪರಿಪಾಠವುಳ್ಳವರಾಗಿರುತ್ತಾರೆ. ಇಂತಹ ಮನೆಗಳ ಸಂಖ್ಯೆ ಗ್ರಾಮಗಳಲ್ಲಿ ಕಡಿಮೆ ಇರುತ್ತವೆ. ಇತ್ತೀಚಿನ ದಿನಗಳಲ್ಲಿ ಕೆಲವಾರು ಗ್ರಾಮಗಳಲ್ಲಿ ವೈಜ್ಞಾನಿಕ ವಿಧಿ-ವಿಧಾನಗಳನ್ನು ಅನುಸರಿಸಿ ಸೂಕ್ತ ಸೌಲಭ್ಯಗಳೊಡನೆ ನಿರ್ಮಿಸಿರುವ ಹೊಸ ಬಗೆಯ ಕೆಲವಾರು ಮನೆಗಳನ್ನು ಕಾಣಬಹುದಾಗಿದೆ.

### ೨. ಮಧ್ಯಮ ಗುಣಮಟ್ಟದ ಮನೆಗಳು:

ಗ್ರಾಮಗಳಲ್ಲಿನ ಮಧ್ಯಮ ಗುಣಮಟ್ಟದ ಮನೆಗಳು ಮಣ್ಣಿನಿಂದ ಕಟ್ಟಲಾಗಿರುವ ಮನೆಗಳಾಗಿರುತ್ತವೆ. ಅವುಗಳ ಗೋಡೆಗಳನ್ನು ಮಣ್ಣಿನಿಂದ ಕಟ್ಟಲಾಗಿರುತ್ತದೆ. ಮತ್ತು ಕುಂಬಾರರ ಇಲ್ಲವೇ ಸೀಮೆ ಹೆಂಚಿನ ಇಲ್ಲವೇ ಹುಲ್ಲಿನ ಮೇಲ್ಛಾವಣಿ ಇರುತ್ತದೆ. ಸಾಮಾನ್ಯವಾಗಿ ಅವುಗಳಲ್ಲಿ ತಲಾ ಒಂದು ಅಥವಾ ಎರಡು ಕೊಠಡಿ ಮತ್ತು ಒಂದು ಚಿಕ್ಕ ಅಂಗಳವಿರುತ್ತದೆ. ಚರಂಡಿ ಏರ್ಪಾಡು ತುಂಬಾ ಕಳಪೆ ರೀತಿಯಲ್ಲಿರುತ್ತವೆ. ಇಂತಹ ಮನೆಗಳಿಗೆ ಶೌಚಾಲಯದ

ವ್ಯವಸ್ಥೆಗಳಿರುವುದಿಲ್ಲ. ಗ್ರಾಮದ ಜನತೆಯು ಹೊರ ಪ್ರದೇಶವನ್ನು/ಬಹಿರ್ಗಿರ್ದೇಶಕ ಹೋಗುವುದು ಸಹಜವಾಗಿ ಕಂಡು ಬರುತ್ತದೆ. ಗ್ರಾಮದ ಜನತೆಯು ಅನಕ್ಷರಸ್ಥರಾಗಿದ್ದರಿಂದ ಸ್ವಚ್ಛತೆಯ ಬಗ್ಗೆ ಕಾಳಜಿ ಇರುವುದಿಲ್ಲ. ಮನೆಯ ಸುತ್ತ ಮುತ್ತ ನೈರ್ಮಲ್ಯಸಹಿತವಾದ ವಾತಾವರಣ ಸೃಷ್ಠಿಯಾಗುತ್ತದೆ.

**೩. ಕಳಪೆ ಗುಣಮಟ್ಟದ ಮನೆಗಳು:**

ಬಹುಮಟ್ಟಿಗೆ ಬಡವರ ಹಾಗೂ ಕಡು ಬಡವರ ಆವಾಸ ಸ್ಥಾನಗಳಾಗಿರುತ್ತವೆ. ಅವುಗಳು ಮನೆ ಎನಿಸಿಕೊಳ್ಳಲು ಅರ್ಹವಾಗಿಲ್ಲದಷ್ಟು ಕಳಪೆಯಾಗಿರುತ್ತವೆ. ಹುಲ್ಲು ಇಲ್ಲವೇ ತೆಂಗಿನ ಗರಿಯಿಂದ ಹಾಗೂ ಕಾಡಲ್ಲಿ ಸಿಗುವ ಬಂದರಿಕೆ ಸೊಪ್ಪಿನಿಂದ ಮನೆಯ ಮೇಲ್ಛಾವಣಿಗಳಿಂದ ಕೂಡಿರುತ್ತದೆ. ಈ ರೀತಿಯ ಮನೆಗಳಲ್ಲಿ ಪ್ರತ್ಯೇಕ–ಪ್ರತ್ಯೇಕ ಕೊಠಡಿಗಳಿರುವುದಿಲ್ಲ. ಗೋಡೆಗಳ ರೀತಿಯಲ್ಲಿ ಕಲ್ಲುಕಂಬಗಳನ್ನು ನೆಟ್ಟು ಅವುಗಳ ನಡುವೆ ಬಂದರಿಕೆ, ತಂಕಂದಿ ಮುಂತಾದ ಗಿಡದ ಸೊಪ್ಪಿನಿಂದ ಗೊಡೆ ಕಟ್ಟಿರುತ್ತಾರೆ. ಇವುಗಳು ಹಂತ ಹಂತವಾಗಿ ಸೊಪ್ಪು ಒಣಗಿ ಬೀಳುವುದರಿಂದ ಅಲ್ಲಿ ಬಿರುಕು ಕಂಡುಬರುತ್ತದೆ. ಇಡೀ ಮನೆ ಒಂದೇ ಕೊಠಡಿಯಿಂದ ಕೂಡಿರುತ್ತದೆ. ಒಮ್ಮೆ ಜೋರಾಗಿ ಮಳೆಗೆ ಇಲ್ಲವೇ ಬಿರುಗಾಳಿಗೆ ಇಂತಹ ಮನೆಗಳು ಸಿಕ್ಕದರೆ ಮುರಿದು ಬೀಳುವ ಸಂಭವವಿರುತ್ತದೆ. ಈ ಬಗೆಯ ಮನೆಗಳು ಗ್ರಾಮೀಣ ಕೊಳೆತ ಪ್ರದೇಶಗಳೆನಿಸುವ ರೀತಿ ಗೋಚರಿಸುತ್ತವೆ.

ಹಿಂದಿನಿಂದಲೂ ಕಟ್ಟಿಕೊಂಡು ಬಂದಂತಹ ಮನೆಗಳ ವಿನ್ಯಾಸವನ್ನು ಬದಲಾಯಿಸಲು ಇತ್ತೀಚಿನ ಸರ್ಕಾರ ಹಲವಾರು ಯೋಜನೆಗಳನ್ನು ಕೈಗೆತ್ತಿಕೊಂಡಿದೆ. ೧೯೫೦ರಲ್ಲಿ ಗ್ರಾಮೀಣ ವಸತಿ ಮಂಡಲಿಯನ್ನು ಸ್ಥಾಪಿಸಲಾಯಿತು. ಗ್ರಾಮಗಳಲ್ಲಿ ನಿವೇಶನಗಳನ್ನು ರೂಪಿಸುವುದು, ಹೊಸ ಬಡಾವಣೆಗಳನ್ನು ನಿರ್ಮಿಸುವುದು, ಮನೆಗಳನ್ನು ನಿರ್ಮಾಣ ಮಾಡುವುದು, ಕುಡಿಯುವ ನೀರಿನ ಪೂರೈಕೆ, ಒಳಚರಂಡಿ ವ್ಯವಸ್ಥೆ ಸಾರಿಗೆ ಹಾಗೂ ಸಮಾಚಾರ ಸಾಧನಗಳ ಸೌಲಭ್ಯಗಳನ್ನು ಒದಗಿಸುವುದು, ವಿದ್ಯುತ್ ದೀಪಗಳ ಏರ್ಪಾಡು ಇವೇ ಮೊದಲಾದವುಗಳ ಬಗ್ಗೆ ಹಲವಾರು ಕಾರ್ಯಕ್ರಮಗಳನ್ನು ವ್ಯಾಪಕವಾಗಿ ಅನುಷ್ಠಾನಗೊಳಿಸಲಾಗುತ್ತಿದೆ. ಗೃಹ ನಿರ್ಮಾಣ ಮಂಡಲಿ, ಗ್ರಾಮೀಣ ವಸತಿ ಮಂಡಲಿ, ಗ್ರಾಮ ವಸತಿ ಯೋಜನೆ, ಜನತಾ ಮನೆ ಯೋಜನೆ ಮುಂತಾದವು ಗ್ರಾಮೀಣ ಜನರಿಗೆ ವಸತಿ ಒದಗಿಸುತ್ತಿವೆ. ನಿವೇಶನ ಉಚಿತ ನಿವೇಶನ, ಮನೆಗಳಲ್ಲಿದವರಿಗೆ, ಗುಡಿಸಲು ವಾಸಿಗಳಿಗೆ ಕಳಪೆ ಗುಣಮಟ್ಟದ ಮನೆಗಳುಳ್ಳವರಿಗೆ 'ಜನತಾ' ಮನೆಗಳನ್ನು ಕಟ್ಟಿಸಿಕೊಡಲಾಗುತ್ತಿದೆ 'ಆಶ್ರಯ ಯೋಜನೆ', ಡಾ. ಬಿ.ಆರ್. 'ಅಂಬೇಡ್ಕರ್ ಆವಾಜ್' ಯೋಜನೆ, ಹುಡ್ಕೋ ಯೋಜನೆ, ಇದರಿಂದ ಗ್ರಾಮೀಣ ವಸತಿ ಜನರಿಗೆ ಗೃಹ ನಿರ್ಮಾಣ ಲಭ್ಯವಾಗುತ್ತಿದೆ. ಕರ್ನಾಟಕ ರಾಜ್ಯದಲ್ಲಿ ಹರಿಜನ, ಗಿರಿಜನ

ಹಾಗೂ ಬಡವರ ಮನೆಗಳಿಗೆ 'ಭಾಗ್ಯಜ್ಯೋತಿ' ಯೋಜನೆಯ ಅನ್ವಯ ಉಚಿತ ವಿದ್ಯುತ್ ದೀಪದ ಏರ್ಪಾಡು ಮಾಡಲಾಗುತ್ತಿದೆ.

ಹೀಗೆ ಗ್ರಾಮೀಣ ವಸತಿ ಪರಿಸ್ಥಿತಿಯನ್ನು ಸುಧಾರಿಸುವ ದಿಸೆಯಲ್ಲಿ ವ್ಯಾಪಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸಲಾಗುತ್ತಿದೆ.

**೨.೨.೨. ಕೃಷಿ:**

ಗ್ರಾಮದ ಉಗಮವು ಬಹಳ ಮಟ್ಟಿಗೆ ಇತಿಹಾಸದಲ್ಲಿನ ಕೃಷಿ ಆರ್ಥಿಕತೆಯ ಉಗಮದೊಂದಿಗೆ ಆಗಿರಬಹುದಾಗಿದೆ. ಗ್ರಾಮದ ಹುಟ್ಟು, ಉಗಮ ಇಲ್ಲವೇ ಅಸ್ತಿತ್ವವು ಮಾನವನು ಎಂದು ತನ್ನ ಅಲೆಮಾರೀ ಜೀವನಕ್ಕೆ ಮಂಗಳ ಹಾಡಿ, ಒಂದು ಕಡೆ ಸ್ಥಿರವಾಗಿ ನೆಲೆನಿಂತು ವಾಸಿಸಲು ತೊಡಗಿದನೋ ಅಲ್ಲಿಂದ ಆರಂಭವಾಗಿರಬಹುದಾಗಿದೆ. ಅದು ವ್ಯವಸಾಯ[illegible]ನ್ನು ಆಗು ಮಾಡುವ ನಿಟ್ಟಿನಲ್ಲಿ ಉಪಯೋಗವಾಗುವ ಸಾಧನ ಸಲಕರಣಗಳನ್ನು ತಯಾರು ಮಾಡುವುದು ಹಾಗೂ ಸುಧಾರಣೆ ಮಾಡಿಕೊಳ್ಳಲು ಮೂಲತಃ ಸಿದ್ಧವಾದ ಹಂತದಿಂದ ಪ್ರಾರಂಭವಾಗಿರುವುದು. ತನ್ಮೂಲಕ ಒಂದು ನಿಗದಿತ ಭೌಗೋಳಿಕ ನೆಲೆಯಲ್ಲಿ ಶಾಶ್ವತ ಸ್ವರೂಪದ ಮನೆಗಳನ್ನು ನಿರ್ಮಿಸಿಕೊಂಡು ಜೀವನ ಸಾಗಿಸುವುದು ಅಭ್ಯಾಸಕ್ಕೆ ಬಂದು, ಆವತ್ತಿನಿಂದ ಗ್ರಾಮ ಅಸ್ತಿತ್ವಕ್ಕೆ ಬಂದಿರುವುದು.

ಮನುಕುಲವು ವಿಶ್ವದ ವಿವಿಧ ಭಾಗಗಳಲ್ಲಿ ಹೇಗೆ ತನ್ನ ಅಲೆಮಾರಿ ಜೀವನ ಬೇಟೆಯಾಡುವುದು, ಆಹಾರವನ್ನರಿಸುವುದು ಇವೇ ಮೊದಲಾದ ಹಂತಗಳನ್ನು ದಾಟಿ, ನೇಗಿಲನ್ನು ಉಪಯೋಗಿಸಿ ಪ್ರಾಣಿಗಳನ್ನು ಬಳಸಿ ಉತ್ತು, ಬೀಜಗಳನ್ನು ಬಿತ್ತಿ ಬೆಳೆಗಳನ್ನು ಬೆಳೆದು ಬದುಕತೊಡಗಿರುವುದರ ಬಗೆಗಿನ ಅಧ್ಯಯನವು ಸಾಮಾಜಿಕ ಸಂಶೋಧನಾ ಕ್ಷೇತ್ರಗಳಲ್ಲಿ ಅತಿ ಕಷ್ಟವಾದ ಹಾಗೂ ಸಂಕೀರ್ಣವಾದ ಸಮಸ್ಯೆಯಾಗಿರುವುದು.

ರಾಷ್ಟ್ರ [illegible] ಕುವೆಂಪುರವರು ರೈತನನ್ನು ಕುರಿತು ನೇಗಿಲಯೋಗಿ ಎಂಬುದಾಗಿ ಪ್ರಸ್ತಾಪ ಮಾಡಿರುವ[illegible], ನೇಗಿಲು, ವ್ಯವಸಾಯ ಮತ್ತು ರೈತ ಅಥವಾ ಕೃಷಿಕ ಇವುಗಳಿಗೆ ಅವಿನಾಭಾವ ಸಂಬಂಧವಿ[illegible]. ನೇಗಿಲು ಒಂದು ಸಾಮಾನ್ಯ ಸಾಧನವೇನೋ ನಿಜ. ಆದರೆ ಅದರ ಸಂಶೋಧನೆ ಯಾವುದೇ ಒಂದು ಶುಭಗಳಿಗೆಯಲ್ಲಿ ಆಗಿದೆ ಎಂದೇ ಹೇಳಬಹುದಾಗಿದೆ. 'ಅನ್ನತೋ ಪ್ರಾಣಃ ಪ್ರಾಣತೋ ಪರಾಕ್ರಿಯಃ' ಎಂಬುದನ್ನು ಸಾಬೀತುಪಡಿಸಬಹುದಾಗಿದೆ, ಆಹಾರವನ್ನು ಪೂರೈಸಬೇಕಾಗಿದೆ.

ಕೃಷಿಯು ಇಡೀ ಸಮುದಾಯಕ್ಕೆ ಪ್ರಪ್ರಥಮವಾಗಿ ಪೂರ್ಣ ಪ್ರಮಾಣದಲ್ಲಿ ಆಹಾರವನ್ನೊದಗಿಸುವ ಭರವಸೆಯನ್ನುಂಟುಮಾಡಿತು. ಬೇಟೆಯಾಡುವುದು, ಮೀನುಹಿಡಿಯುವುದು, ಹಣ್ಣುಹಂಪಲುಗಳನ್ನು ಸಂಗ್ರಹಿಸುವುದು ಮತ್ತು ಅಲೆಮಾರಿತನದಿಂದ ಪಡೆಯಬಹುದಾಗಿದೆ. ಆಹಾರ ಪದಾರ್ಥಗಳಿಗಿಂತಲೂ ಕೃಷಿಯ ವತಿಯಿಂದ ಲಭ್ಯವಾಗಬಹುದಾಗಿರುವ ಕಾಳುಕಡ್ಡಿಗಳು

ದವಸಧಾನ್ಯಗಳು ಮೊದಲಾದವು ಗರಿಷ್ಠ ಪ್ರಮಾಣದಲ್ಲಿ ಉತ್ಪಾದನೆಯಾಗಬಹುದಾದವು. ಹಾಗೂ ಸುದೀರ್ಘ ಅವಧಿ ಕೆಡದಂತೆ ಶೇಖರಿಸಿ ಇಡಬಹುದಾದವೂ ಆಗಿರವುವು. ದವಸಧಾನ್ಯಗಳನ್ನು ಶೇಖರಿಸಿಡಲು ತಮ್ಮ ಮನೆಯ ಅಂಗಳದಲ್ಲಿ ಹಗೆವುಗಳನ್ನು, ಮನೆಗಳಲ್ಲಿ ಗರ್ಜಿಗಳನ್ನು ಉಪಯೋಸುತ್ತಿದ್ದರು. ಹಳ್ಳಿಗಳ ಜನತೆಯು ಕೃಷಿಯಿಂದ ಜೀವನಕ್ಕೆ ಬೇಕಾದಂತಹ ಆಹಾರ ಪದಾರ್ಥಗಳನ್ನು ಹಾಗೂ ವಾಣಿಜ್ಯ ಬೆಳೆಗಳನ್ನು ಬೆಳೆಯುವುದರ ಮುಖಾಂತರ ತಮ್ಮ ಆರ್ಥಿಕ ಸಮಸ್ಯೆಯನ್ನು ಈಡೇರಿಸಿಕೊಳ್ಳುತ್ತಾರೆ. ಹಿಂದಿನ ಕಾಲದಲ್ಲಿ ಹಳ್ಳಿಯ ಗೌಡನ ಹೊಲದಲ್ಲಿ ಹೊಲಗಳಿಲ್ಲದವರು ಬಂದು ದುಡಿಯಬೇಕಿತ್ತು. ಗೌಡರು ಅಥವಾ ಭೂಮಾಲಿಕರು ದುಡಿಯುವ ಜನರಿಗೆ ಕೂಲಿರೂಪದಲ್ಲಿ ದವಸಧಾನ್ಯಗಳನ್ನು ನೀಡುತ್ತಿದ್ದರು. ಕಾಲ ಕಳೆದಂತೆ, ಆಧುನಿಕತೆ ಮುಂದುವರಿದಂತೆ ಕೂಲಿಕಾರರಿಗೆ ಕಾಳುಕಡಿಗಳ ಬದಲಾಗಿ ಹಣದ ರೂಪದಲ್ಲಿ ಕೂಲಿಯನ್ನು ನೀಡುತ್ತಿದ್ದರೆ. ಇತ್ತೀಚಿನ ಬದಲಾವಣೆಗಳನ್ನು ಗಮನಿಸಿದರೆ ಒಂದಷ್ಟು ಭಾಗ ಜನತೆ ಮಾತ್ರ ವ್ಯವಸಾಯ ಉದ್ಯೋಗದಲ್ಲಿ ತೊಡಗಿದ್ದಾರೆ. ಉಳಿದ ಭಾಗ ಜನತೆ ಕೃಷಿಯೇತರ ಚಟುವಟಿಕೆಗಳಲ್ಲಿ ಅಂದರೆ ಕೈಗಾರಿಕೆ ಮೊದಲಾದವುಗಳಲ್ಲಿ ತೊಡಗಿಸಿಕೊಳ್ಳಬಹುದಾದ ಸಂಭವ ಕಂಡು ಬರುತ್ತಿದೆ.

ಜನಸಂಖ್ಯೆ ಪ್ರಮಾಣವು ಹೆಚ್ಚಾದಂತೆ ಬದುಕಲು ಬೇಕಾಗುವ ಮೂಲಭೂತ ಸೌಕರ್ಯಗಳನ್ನು ಹೆಚ್ಚು ಮಾಡಬೇಕಾಗುತ್ತದೆ. ಆದರಿಂದ ಇಂದಿನ ಆಧುನಿಕ ಯುಗದಲ್ಲಿ ಕೃಷಿಯು ಕೇವಲ ಭೂಮಾಲಿಕರಿಗೆ ಮಾತ್ರ ಸೀಮಿತವಾಗಿದೆ. ಉಳಿದ ಜನತೆಯು ಆಧುನಿಕತೆಯತ್ತ ಸಾಗುತ್ತಿದ್ದಾರೆ. ಅಂದರೆ ನಗರಗಳ ಕಡೆ ದಾವಿಸಿ ಅಲ್ಲಿರುವಂತಹ ಕೈಗಾರಿಕೆಗಳಲ್ಲಿ ದೊಡ್ಡ ದೊಡ್ಡ ಎಸ್ಟೇಟ್‌ಗಳಲ್ಲಿಗೆ ಹೋಗಿ ತಮ್ಮ ಬದುಕನ್ನು ರೂಪಿಸಿಕೊಳ್ಳುತ್ತಿದ್ದಾರೆ. ಇದಕ್ಕೆ ಕಾರಣ ಜನಸಂಖ್ಯೆಯ ಹೆಚ್ಚಳ. ಭೂಮಿಯಿಂದ ಬೆಳೆದಂತಹ ಬೆಳೆಯಿಂದಷ್ಟೆ ತಮ್ಮ ಮೂಲಭೂತ ಸೌಕರ್ಯಗಳನ್ನು ಈಡೇರಿಸಿಕೊಳ್ಳಲಾಗದೆ ಜನತೆಯು ಈ ದಾರಿ ಕಂಡುಕೊಂಡಿದ್ದಾರೆ. ಆಧುನಿಕತೆಯು ಬೆಳೆದಂತೆ ಕೃಷಿಯಲ್ಲಿ ಒಳ್ಳೆಯ ಫಲವತ್ತಾದ ಬೆಳೆ ಹಾಗೂ ಒಳ್ಳೆಯ ಇಳುವರಿಯನ್ನು ಕಂಡುಕೊಳ್ಳಲಾಗಿದೆ. ಆದರೆ ಅದು ಕೇವಲ ಉಳ್ಳವರು ಅಥವಾ ಭೂಮಾಲಿಕರ ಸ್ವತ್ತಾಗುತ್ತಿದೆ. ಆಧುನಿಕತೆಯಿಂದ ಕೃಷಿಯು ವಿಭಿನ್ನವಾದಂತಹ ಬದಲಾವಣೆಯನ್ನು ಕಂಡುಕೊಳ್ಳುತ್ತಿದೆ. ಹಳ್ಳಿಯ ಜನತೆಯು ಅದರಿಂದ ಸ್ವಲ್ಪಮಟ್ಟಿಗೆ ತಮ್ಮ ಹಸಿವನ್ನು ನೀಗಿಸಿಕೊಳ್ಳುತ್ತಿದ್ದಾರೆ. ಹಳ್ಳಿಯ ಜನತೆಯು ಕೃಷಿಯ ಜೊತೆ–ಜೊತೆಯಲ್ಲಿ ಪ್ರಾಣಿಗಳನ್ನು ಸಾಕುವುದು (ಕುರಿ, ಕೋಳಿ, ಮೇಕೆ, ಹಂದಿ, ಹಸು, ಎಮ್ಮೆ ಮುಂತಾದವು) ಜೇನು ಸಾಕಾಣಿಕೆ, ಕುಂಬಾರಿಕೆ, ಬಡಿಗಿ ನೂಲುವುದು, ನೇಯುವುದು, ಕಮ್ಮಾರಿಕೆ ಇನ್ನಿತರ ಕೃಷಿ ಕೆಲಸಗಳನ್ನು ಮಾಡುವುದರ ಮುಖಾಂತರ ಹಳ್ಳಿಯ ಜನತೆಯು ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ.

### ೨.೨.೩. ಬೆಳೆಗಳು:

ಗ್ರಾಮೀಣ ಸಮುದಾಯದ ಜನತೆಯು ಸಹಜವಾಗಿ ಎರಡು ರೀತಿಯ ಬೆಳೆಗಳನ್ನು ಬೆಳೆಯುತ್ತಾರೆ. ಆಹಾರ ಬೆಳೆಗಳು ಮತ್ತು ವಾಣಿಜ್ಯ ಬೆಳೆಗಳು. ರೈತರು ಹೆಚ್ಚು-ಹೆಚ್ಚು ಆಹಾರ ಬೆಳೆಗಳನ್ನು ಬೆಳೆಯುತ್ತಾರೆ. ವರ್ಷವಿಡೀ ಆಹಾರದ ಅವಶ್ಯಕತೆಯಿರುವುದರಿಂದ ರೈತರು ಈ ಬೆಳೆಯನ್ನು ಹೆಚ್ಚು ಬೆಳೆಯುತ್ತಾರೆ. ಅದರಲ್ಲಿಯೂ ಅವರಿಗೆ ಹೊಲ ಕಡಿಮೆ ಪ್ರಮಾಣದಲ್ಲಿರುತ್ತದೆ. ಅಂದಿನ ಬಂಡವಾಳಶಾಹಿಗಳು ಅಧಿಕಾರದ ಅಮಲಿನಿಂದ ಅತೀ ಹೆಚ್ಚು ಭೂಮಿಯನ್ನು ಹೊಂದಿದ್ದರು. ಇವರು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದರು.

ಸಿಂಧೂ ನದಿ ನಾಗರೀಕತೆಯಿಂದಲೂ ಸಹ ಬೆಳೆಗಳನ್ನು ಬೆಳೆಯುತ್ತಿದ್ದರು. ಸಿಂಧೂ ನಾಗರಿಕತೆಯಲ್ಲಿ ಕಂಡುಬಂದಿರುವ ಮಹಂಜದಾರೋ ಪಟ್ಟಣದಲ್ಲಿ ಮುಖ್ಯ ಆಹಾರ ಬೆಳೆಯಾಗಿ ಗೋದಿಯಾಗಿತ್ತು. ಹಾಗೆಯೇ ಬಾರ್ಲಿ, ಕರ್ಜುರಗಳನ್ನು ಬೆಳೆಯುತ್ತಿದ್ದರು. ಜೊತೆಗೆ ರಾಗಿ, ಹತ್ತಿ ಇನ್ನು ಮುಂತಾದ ಆಹಾರ ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದರು. ನಾಗರೀಕತೆಯಿದ್ದಂತೆ ಬೆಳೆಯು ಬೆಳೆಗಳಲ್ಲಿಯು ಸಹ ಬದಲಾವಣೆಗಳು ಕಂಡು ಬರತೊಡಗಿದವು. ವಿದೇಶಿಯರು ಭಾರತದ ಮೇಲೆ ದಾಳಿ ಮಾಡುವುದರಿಂದ ಹಾಗೂ ವಿದೇಶಿಯರು ಭಾರತದಲ್ಲಿ ಬಂದು ನೆಲೆಸುವುದರಿಂದ ಅವರ ಸಂಸ್ಕೃತಿಯನ್ನು ಭಾರತದಲ್ಲಿ ಬಿತ್ತಿ ಬೆಳೆಯತೊಡಗಿದರು. ಆಧುನಿಕತೆ ಬೆಳೆದಂತೆ 'ಕಾಲ ನಿಂತ ನೀರಾಗಿರದೆ ಸದಾ ಹರಿಯುವ ನೀರಾಗಿ' ಸದಾ ಬದಲಾವಣೆಗಳನ್ನು ಕಂಡು ಕೊಳ್ಳುತ್ತಾ (ಹೋಯಿತು) ಬಂದಿತು. ಅದಿಮಾನವನು ಒಂದು ಕಡೆ ನೆಲೆಯುರಿ ತನಗೆ ಬೇಕಾದ ಬೆಳೆಯನ್ನು ಬೆಳೆಯಲು ಪ್ರಯತ್ನಿಸಿದನು. ಅದು ಹಂತ-ಹಂತವಾಗಿ ಬೆಳವಣಿಗೆಗಳನ್ನು ಕಂಡುಕೊಂಡಿತು.

ಗ್ರಾಮ ಸಮುದಾಯಗಳನ್ನು ಹಾಗೂ ಭಾರತದ ಹಳ್ಳಿಗಳನ್ನಿಟ್ಟುಕೊಂಡು ಬೆಳೆಗಳನ್ನು ನೋಡುವುದಾದರೆ ಆಹಾರ ಬೆಳೆಗಳು ರಾಗಿ, ಜೋಳ, ನವಣೆ, ಭತ್ತ, ಗೋದಿ, ತೋಗರಿ, ಸಜ್ಜಿ, ಎಳ್ಳು ಇನ್ನು ಮುಂತಾದ ಬೆಳೆಗಳು. ವಾಣಿಜ್ಯ ಬೆಳೆಗಳಾಗಿ ಹತ್ತಿ, ಶೆಂಗಾ, ಮೆಕ್ಕೆ, ಜೋಳ, ತಂಬಾಕು, ಅಡಕೆ, ತೆಂಗು, ಬಾಳೆ, ಎಲೆ, ಹೂ ಮುಂತಾದವು ವಾಣಿಜ್ಯ ಬೆಳೆಗಳು. ತೆಂಗು, ಎಲೆ, ಹೂವು ಮುಂತಾದ ಬೆಳೆಗಳು ಇತ್ತೀಚಿಗೆ ವಾಣಿಜ್ಯ ಬೆಳೆಗಳಾಗಿವೆ. ಅತೀ ಪುರಾತನ ಬೆಳೆಯೆಂದರೆ ರಾಗಿ, ಹತ್ತಿ, ಬಾರ್ಲಿ ಈ ಎಲ್ಲಾ ಬೆಳೆಗಳನ್ನು ರೈತನು ಬೆಳೆದು ಸಮುದಾಯಕ್ಕೆ ಅಥವಾ ಸಮಾಜಕ್ಕೆ ನೀಡುವುದರಿಂದ ರೈತನನ್ನು 'ಭಾರತದ ಬೆನ್ನೆಲುಬು' ಎಂದು ಕರೆಯುತ್ತಾರೆ. ರೈತರ ಬೆಳೆಯಿಂದಲೇ ನಾಡು ಸಮೃದ್ಧವಾಗಿದೆ. ಆಧುನಿಕತೆ ಹಾಗೂ ತಾಂತ್ರಿಕತೆ ಮುಂದುವರೆದಂತೆ ಬೆಳೆಯುವ ಬೆಳೆಗಳೂ ಸಹ ಬದಲಾವಣೆಯನ್ನು ಕಂಡುಕೊಳ್ಳುತ್ತಿವೆ. ಹಿಂದೆ ಬೆಳೆದ ಬೆಳೆಯ ಬೀಜವನ್ನೇ ಮುಂದಿನ ಬೆಳೆಗೆ ಉಪಯೋಗಿಸುತ್ತಿದ್ದರು. ಆದರೆ ಇಂದು ವೈಜ್ಞಾನಿಕತೆಗೆ ನಂಬಿ ಕೊಂಡಿರುವುದರಿಂದ ಅದೇ ಬೀಜವನ್ನು ಬಲಸದೇ ಮತ್ತೇ ಸೀಡ್ಸ್ ಕಂಪನಿಗಳಿಗೆ ಮೊರೆ ಹೋಗಬೇಕಾಗಿದೆ.

### ೨.೨.೪. ಕಸಬುಗಳು:

ಕಸಬುಗಾರರು ಹೆಚ್ಚು ಕಂಡು ಬರುವುದು ಹಳ್ಳಿಗಳಲ್ಲಿ. ಪ್ರಥಮವಾಗಿ ಜಾತಿಯು ಹುಟ್ಟಿಕೊಂಡಿದ್ದು ಕಸುಬಿನ ಆಧಾರದ ಮೇಲೆಯೇ, ಹಿಂದಿನ ಕಾಲದಲ್ಲಿ ಆಯಾ ಕಸುಬಿಗೆ ಸಂಬಂಧಿಸಿದಂತಹ ವ್ಯಕ್ತಿಗಳು ತಮ್ಮ ಕಸುಬಿನ ಬಗ್ಗೆ ಆತ್ಮ ಗೌರವವನ್ನಿಟ್ಟುಕೊಂಡಿದ್ದರು. ಕಸುಬುದಾರರೆಂದರೆ ಕಮ್ಮಾರಿಕೆ ಮಾಡುವುದು. ಕುಂಬಾರಿಕೆ, ಬಡಗಿ, ತಳವಾರಿಕೆ, ಕ್ಷೌರಿಕ, ನೀರುಗುಂಟ ಚಮ್ಮಾರರು, ಕೃಷಿಕರು, ಅಕ್ಕಸಾಲಿಗ, ಅಗಸ ಇನ್ನು ಮುಂತಾದವರು ತಮ್ಮ-ತಮ್ಮ ಹಳ್ಳಿಗಳೇ ತಮ್ಮ-ತಮ್ಮ ಕಾಯಕದಲ್ಲಿ ಮನಃಪೂರ್ವಕವಾಗಿ ಬಾಗಿಯಾಗುತ್ತಿದ್ದರು. ಈ ರೀತಿಯ ಕಸಬುಗಾರರಿಗೆ ವರ್ಷಕ್ಕೆ ಒಂದು ಬಾರಿಯಾಗಿ ಅವರಿಗೆ 'ಆಯಾ'ವೆಂದು ಇಂತಿಷ್ಟು ಕಾಳುಕಡಿಯನ್ನು ನಿಗದಿ ಮಾಡಲಾಗಿರುತ್ತಿತ್ತು. ಸುಗ್ಗಿಯ ಕಾಲದಲ್ಲಿ ಈ ಆಯಾವನ್ನು ನೀಡಲಾಗುತ್ತಿತ್ತು.

ಆಯಾವು ಕಸುಬಿಗೆ ಸಂಬಂಧಿಸಿದಂತೆ ನಿಗದಿಯಾಗುತ್ತಿತ್ತು. ಈ ಆಯಾದ ನಿಗದಿಯನ್ನು ಊರಿನ ಗೌಡ, ಶಾನುಭೋಗ ವರ್ಷದ ಕೊನೆ ಅಥವಾ ಸುಗ್ಗಿಕಾಲದ ಕೊನೆಯಲ್ಲಿ ಊರ ಬೇವಿನ ಮರದ ಕಟ್ಟಿ ಅಥವಾ ಪಂಚಾಯತಿ ಕಟ್ಟಿಯಲ್ಲಿ ಊರಿನ ಪ್ರತಿಯೊಬ್ಬ ಸದಸ್ಯರನ್ನು ಕರೆದು ಸಮಾಲೋಚನೆ ನಡೆಸುತ್ತಿದ್ದರು. ನಂತರ ಯಾವ-ಯಾವ ಕಸುಬಿಗೆ ಎಷ್ಟು-ಎಷ್ಟು ಆಯಾ ಕೊಡಬೇಕು ಎಂಬುದನ್ನು ನಿಗಧಿ ಮಾಡುತ್ತಿದ್ದರು. ಗೌಡ ಮತ್ತು ಯಜಮಾನರ ಮಾತನ್ನು ಯಾರು ಮೀರುವಂತಿರಲಿಲ್ಲ. ಎಲ್ಲರೂ ಒಪ್ಪಿಕೊಳ್ಳುತ್ತಿದ್ದರು. ಅವರು ಸಹ ಮಳೆ ಬೆಳೆಯನ್ನು ನೋಡಿಕೊಂಡು ಆಯಾ ನಿಗಧಿ ಮಾಡುತ್ತಿದ್ದರು.

'ಕಾಲ ನಿಂತ ನೀರಲ್ಲ ಅದು ಸದಾ ಹರಿಯುವ ನೀರು' ಎಂಬ ಉಕ್ತಿಯನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಏಕೆಂದರೆ ಖಾಸಗೀಕರಣ, ಉದಾರೀಕರಣ, ಜಾಗತೀಕರಣ, ಆಧುನಿಕತೆ, ತಂತ್ರಜ್ಞಾನ ವಿದೇಶಿ ಕಂಪನಿಗಳಿಂದ ಸಮಾಜ ವೇಗವಾಗಿ ಬದಲಾವಣೆಯನ್ನು ಕಂಡುಕೊಂಡಿದೆ. ಆದರಿಂದ ಇಂದಿನ ಕಸಬುದಾರರು ಶೋಚನೀಯವಾದ ಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ವ್ಯವಸಾಯ ಮಾಡಲಿಕ್ಕೆ ಬೇಕಾದಂತಹ ಪ್ರತಿಯೊಂದು ವಸ್ತುಗಳನ್ನು ಸಾಮಿಲ್‌ನಿಂದ ತಂದುಕೊಳ್ಳುತ್ತಿದ್ದಾರೆ. ವಿದೇಶಿಯರ ಪ್ಲಾಸ್ಟಿಕ್ ಬಂದಿದ್ದರಿಂದ ಕುಂಬಾರಿಕೆಯವರು ಮೂಲೆ ಗುಂಪಾಗಿದ್ದಾರೆ. ಅದೇ ರೀತಿಯಾಗಿ ಬಟ್ಟೆತೊಳೆಯುವ ಯಂತ್ರ ಬಂದಾಗಿನಿಂದ (ವಾಷಿಂಗ್ ಮಿಷನ್) ಅಗಸ ಕಾಣದಾಗಿದ್ದಾನೆ. ಅಕ್ಕಸಾಲಿಗರಿಗೆ ಕಲಸವೇ ಇಲ್ಲದಂತಾಗಿದೆ. ಪ್ರತಿಯೊಂದು ಒಡವೆಗಳು ತಯಾರಾಗಿಯೇ ಬರುತ್ತಿವೆ ಈಗ ಉಳಿದು ಕೊಂಡವರು ಎಂದರೆ ಕ್ಷೌರಿಕರು, ಕೃಷಿಕರು ಮಾತ್ರ ಬೆರಳೆಣಿಕೆಯಷ್ಟು ಜನ ಕಂಡು ಬರುತ್ತಿದ್ದಾರೆ. ಇವರ ಜೊತೆಗೆ ಕುರಿ ಸಾಕುವವರು, ಹಗ್ಗ ನುಡಿಯುವವರು ಕೆಲ ಹಳ್ಳಿಗಳಲ್ಲಿ ಕಂಡುಬರುತ್ತಾರೆ.

## ೨.೩. ಗ್ರಾಮ ಸಮಾಜದಲ್ಲಿ ಶ್ರೇಣೀಕರಣ ವ್ಯವಸ್ಥೆ:

"ಜನ್ಮನಂ ಜಾಯತೇ ಶೂದ್ರಃ ಸಂಸ್ಕಾರತ್ ದ್ವಿಜ ಉಚ್ಚತೇ" ಹುಟ್ಟುವಾಗ ಎಲ್ಲರೂ ಶೂದ್ರರಾಗಿಯೇ ಹುಟ್ಟುತ್ತಾರೆ. ನಂತರ ಜೀವನದಲ್ಲಿ ಸಂಸ್ಕಾರ ಹೊಂದಿದವರು ದ್ವಿಜರಾಗುತ್ತಾರೆ. ಸಂಸ್ಕೃತ ಭಾಷೆಯಲ್ಲಿನ ಈ ಉಕ್ತಿಯಿಂದ ನಮಗೆ ಸ್ಪಷ್ಟವಾಗುವುದೆಂನೆಂದರೆ ಹುಟ್ಟಿನಿಂದ ಎಲ್ಲರೂ ಸರಿಸಮಾನರಾಗಿದ್ದಾರೆ ನಂತರ ಗುಣ ಮತ್ತು ವೃತ್ತಿಗಳಿಗನುಗುಣವಾಗಿ ವಿವಿಧ ವರ್ಗಗಳಾಗುತ್ತವೆ. ಪರಿಸರವನ್ನು ಸೂಕ್ತ ರೀತಿಯಲ್ಲಿ ಸದುಪಯೋಗ ಮಾಡಿಕೊಂಡು ಅಭಿವೃದ್ಧಿ ಹೊಂದಿ ಸುಸಂಸ್ಕೃತರಾಗಿ ಯಾರಾದರೂ ಮೇಲಿನ ವರ್ಗಗಳನ್ನು ಸೇರಬಹುದು ಇಲ್ಲವೇ ದುರುಪಯೋಗ ಮಾಡಿಕೊಂಡು ಸ್ಥಾನಮಾನದಲ್ಲಿ ಕುಂಠಿತ ಹೊಂದಿ ಕೆಳವರ್ಗಕ್ಕೆ ಇಳಿಯಬಹುದು.ನಿರ್ಬಂಧರಹಿತ ವರ್ಗ ಪದ್ಧತಿಯೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಮತ್ತು ಶೂದ್ರ ಎಂಬ ಚತುರ್ವರ್ಣ ವ್ಯವಸ್ಥೆಯ ಮೂಲಕ ಭಾರತೀಯ ಏಂದೂ ಸಮಾಜದಲ್ಲಿ ಅಸ್ತಿತ್ವಕ್ಕೆ ಬಂದಿದೆ. ಕ್ರಮೇಣ ಒಂದೇ ವೃತ್ತಿ ಅನುಸರಿಸುತ್ತಿದ್ದವರಲ್ಲಿಯೇ 'ನಾವು ನಮ್ಮವರು' ಎಂಬ ಭಾವನೆ ಬೇರೆಯವರನ್ನು 'ಅನ್ಯರು' ಎಂದು ಪರಿಗಣಿಸುವ ಭಾವನೆ ಬೆಳೆದು ಸಂಕುಚಿತ ಮನೋಭಾವ, ಸಾಮಾಜಿಕ ಅಂತರ, ಸಾಮಾಜಿಕ ಬದಲಾವಣೆ ಮೊದಲಾದವುಗಳಿಂದ ಕಠಿಣ ಸ್ವರೂಪದ ಜಾತಿ ಪದ್ಧತಿ ಜನ್ಮ ತಾಳಿತು.

ಜಾತಿ ಪದ್ಧತಿಯು ಸಾಮಾಜಿಕ ಸ್ತರವಿನ್ಯಾಸದ ಒಂದು ವಿಶಿಷ್ಟ ಬಗೆ. ಇದು ಪ್ರಾಚೀನ ಹಾಗೂ ಭಾರತೀಯ ಸಮಾಜದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಆದರೂ ಹಿಂದೆ ಜಾತಿಯು ಹುಟ್ಟಿರುವುದು ಶ್ರೇಣೀಕರಣ ವ್ಯವಸ್ಥೆಯಿಂದಲೇ. ವೃತ್ತಿಗೆ ಅನುಗುಣವಾಗಿ ಜಾತಿಯು ತನ್ನ ಸ್ವರೂಪವನ್ನು ಪಡೆದುಕೊಂಡಿದೆ. ಇದನ್ನು ಮದ್ಯಕಾಲೀನ "ಕನ್ನಡ ಸಾಹಿತ್ಯದಲ್ಲಿ ಬರುವ ವಚನಕಾರ"ರನ್ನು ಅಧ್ಯಯನ ಮಾಡಿದರೆ ತಿಳಿಯಬಹುದು. ಭಾರತೀಯ ಮಹಾನ್ ಗ್ರಂಥಗಳು ವೇದಗಳು, ಉಪನಿಷತ್‌ಗಳು ಹೇಳುವಂತೆ ತಲೆಯನ್ನು ಬ್ರಾಹ್ಮಣನೆಂದು, ಬುಜಗಳನ್ನು ಕ್ಷತ್ರಿಯರೆಂದು, ಉಳಿದ ಭಾಗ ವೈಶ್ಯರೆಂದು, ಕಾಲಿನ ಪಾದವನ್ನು ಶೂದ್ರರೆಂದು ಗುರುತಿಸಲಾಗಿದೆ. ಇದನ್ನು ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಪೂಜೆ, ಯಾಗ, ಯಜ್ಞಗಳನ್ನು ಮಾಡುವವರು ಬಾಹ್ಮಣರೆಂದು, ದೇಶಕ್ಕಾಗಿ ಹೋರಾಡುವವರನ್ನು ಕ್ಷತ್ರಿಯರೆಂದು, ಭೂಮಾಲಿಕರ ಹೊಲಗಳಲ್ಲಿ ಒಕ್ಕಲುತನ ಮಾಡುವವರನ್ನು ವೈಶ್ಯರೆಂದು, ಅಳಿದುಳಿದ ಕೆಲಸಗಳನ್ನು ಮಾಡುವವರು ಶೂದ್ರರೆಂದು ಪರಿಗಣಿಸಲಾಗಿದೆ. ಈ ಶ್ರೇಣೀಕೃತ ವ್ಯವಸ್ಥೆಯು ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಜಾಗತೀಕರಣ, ಆಧುನೀಕರಣ, ಖಾಸಗೀಕರಣ, ತಂತ್ರಜ್ಞಾನ ಮುಂದುವರಿದಂತೆ ಈ ಶ್ರೇಣೀಕೃತ ವ್ಯವಸ್ಥೆಯು ಒಂದು ಮಟ್ಟದಲ್ಲಿ ಬದಲಾವಣೆಯನ್ನು ಕಂಡುಕೊಳ್ಳದಿದ್ದರೂ ಸಹ ಕೆಲ ಸಂದರ್ಭಗಳಲ್ಲಿ

ಬದಲಾಗಿರುವುದನ್ನು ಕಾಣಬಹುದಾಗಿದೆ. ಇತ್ತೀಚಿನ ದಿನಮಾನಗಳಲ್ಲಿ ಜಾತಿ ವ್ಯವಸ್ಥೆಯನ್ನು ಬದಿಗಿಟ್ಟು ಎಲ್ಲಾ ವರ್ಗದವರಿಗೂ ಶಿಕ್ಷಣ ಸಿಗುತ್ತಿರುವುದರಿಂದ ವ್ಯವಸ್ಥೆ ಬದಲಾವಣೆಯನ್ನು ಕಂಡುಕೊಂಡಿದೆ. ಶಿಕ್ಷಣವು ಪ್ರತಿಯೊಂದು ಹಂತಗಳನ್ನು ಸಹ ಬದಲು ಮಾಡುವ ಜ್ಞಾನವನ್ನು ಹೊಂದಿದೆ. ದಲಿತರಿಗೆ ಶಿಕ್ಷಣ ಸಿಗುವುದರಿಂದ ಅವರು ಸಹ ಉತ್ತಮ ಜೀವನ ನಡೆಸಲು ಮುಂದಾಗುತ್ತಿದ್ದಾರೆ. ಶಿವರಾಮ ಕಾರಂತರ ಚೋಮನ ದುಡಿ ಕಾದಂಬರಿಯ ಸ್ಥಿತಿಯನ್ನು ಗಮನಿಸಿದರೆ, ಅಂದಿನ ಸ್ಥಿತಿಯು ಇಂದು ಕಂಡು ಬಂದಿಲ್ಲ. ಏಕೆಂದರೆ ಉಳುವವನೇ ಭೂ ಒಡೆಯ ಎಂಬ ತತ್ವವನ್ನು ಅನುಸರಿಸದಿದ್ದರೂ ಸಹ ಶಿಕ್ಷಣದ ಉತ್ತಮ ಜ್ಞಾನದಿಂದ ಬದುಕುವ ರೀತಿಯನ್ನು ಕಂಡುಕೊಳ್ಳುತ್ತಿದ್ದಾನೆ. ಇಂದಿನ ದಿನಗಳಲ್ಲಿ ವೈಶ್ಯರು, ಶೂದ್ರರೂ ಬ್ರಾಹ್ಮಣರಂತೆಯೇ ಪೂಜೆ-ಪುನಸ್ಕಾರಗಳನ್ನು ಮಾಡುತ್ತಿದ್ದಾರೆ. ಹಾಗೆಯೇ ಮೇಲು ವರ್ಗದ ರೀತಿಯಲ್ಲಿಯೇ ಕೆಳವರ್ಗದ ಜನತೆಯು ಸಹ ಹಬ್ಬ ಆಚರಣೆಗಳನ್ನು ಮಾಡುತ್ತಿದ್ದಾರೆ. ಭೂಮಾಲಿಕರಂತೆ ಶೂದ್ರರು ಸಹ ಭೂಮಾಲಿಕರಾಗಿ ಭೂಒಡೆಯರಾಗಿದ್ದಾರೆ. ಬ್ರಾಹ್ಮಣರಂತೆ ಕೆಳವರ್ಗದವರು ವಿದ್ಯಾವಂತರಾಗಿ ಬುದ್ಧಿಯನ್ನು ಬೆಳೆಸಿಕೊಂಡಿದ್ದಾರೆ. ಬ್ರಾಹ್ಮಣ ಕವಿಗಳಂತೆ ಶೂದ್ರ ಕವಿಗಳು ಸಹ ಸಾಹಿತ್ಯ ರಚನೆ ಮಾಡಿದ್ದಾರೆ. (ಮಾಸ್ತಿ, ಕಾರಂತ, ಅನಂತಮೂರ್ತಿ, ದೇವನೂರು, ಸಿದ್ಧಲಿಂಗಯ್ಯ, ಬಿ.ಟಿ. ಲಲಿತಾನಾಯ್ಕ)

ಸಮಾಜವು ಬದಲಾದಂತೆ ಹಳ್ಳಿಗಳ ಸಮಾಜವೂ ಸಹ ಬದಲಾವಣೆಯತ್ತ ಸಾಗಿದೆ. ಹಳ್ಳಿಯ ಪರಿಸರದಲ್ಲಿ ಜಾತೀಯತೆಯು ಬಹಳಷ್ಟಿದ್ದರೂ ಸಹ ಅದು ಇತ್ತೀಚೆಗೆ ಕಂಡು ಬರುತ್ತಿಲ್ಲಾ ಶಿಕ್ಷಣ ಪಡೆದಂತಹ ಜ್ಞಾನವಂತರು ಜಾತಿಯ ಗೋಜಿಗೆ ಹೋಗದೆ ಎಲ್ಲಾ ಜಾತಿಯವರ ಜೊತೆಯಲ್ಲಿ ಸಂಬಂಧ ಬೆಳೆಸುತ್ತಿದ್ದಾರೆ. ಇತ್ತೀಚಿನ ವಿವಾಹವಾಗುವ ಹುಡುಗ-ಹುಡಗಿ ಇಬ್ಬರಿಗೂ ಸರ್ಕಾರಿ ಕೆಲಸವಿದೆ ಎಂದರೆ ತಂದೆ-ತಾಯಿಗಳು ಅದ್ದೂರಿಯಾಗಿ ವಿವಾಹ ಮಾಡಿಕೊಡುತ್ತಿದ್ದಾರೆ. ಅಥವಾ ಯಾವುದೋ ಒಂದು ಕಾಲಘಟ್ಟದಲ್ಲಿ ಮೇಲು ಜಾತಿ-ಕೇಳ ಜಾತಿ, ಕೆಳ ಜಾತಿ-ಮೇಲು ಜಾತಿ, ಹುಡುಗ-ಹುಡಗಿಯರ ಜೊತೆ ಪ್ರೀತಿ ಪ್ರಾರಂಭವಾಗಿ ಅದು ಕೊನೆಯಲ್ಲಿ ಜಾತಿಯನ್ನು ನೋಡದೇ ವಿವಾಹವಾಗಿ ಕೆಲ ದಿನಗಳ ಕಾಲ ತಂದೆ-ತಾಯಿ, ಸಂಬಂಧಿಕರಿಂದ ದೂರವಿದ್ದು ಕೆಲ ವರ್ಷಗಳ ನಂತರದಲ್ಲಿ ಸರಿ ಹೊಂದಿಕೊಳ್ಳುವ ವಾತಾವರಣ ಸೃಷ್ಟಿಯಾಗುವುದನ್ನು ಕಾಣಬಹುದು. ಈ ಹಿಂದೆ ಇದ್ದಂತಹ ಶ್ರೇಣೀಕೃತ ಜಾತಿ ವ್ಯವಸ್ಥೆಯನ್ನು ಇಂದಿನ ಆಧೂನೀಕರಣ, ಜಾಗತೀಕರಣ, ತಂತ್ರಜ್ಞಾನ, ಶಿಕ್ಷಣ ವ್ಯವಸ್ಥೆಯನ್ನು ಬದಲಾಯಿಸುವ ಪ್ರಯತ್ನ ಮಾಡುತ್ತಿವೆ. ಇದು ಸಮುದಾಯ ಬದಲಾವಣೆಯನ್ನು ಕಂಡುಕೊಳ್ಳುತ್ತಿದ್ದಂತೆ ತಾವು ಸಹ ಬದಲಾವಣೆಯನ್ನು ಕಂಡುಕೊಳ್ಳಬೇಕು ಎಂಬ ಆತ್ಮ ವಿಶ್ವಾಸ ಗ್ರಾಮೀಣ ಜನತೆಯಲ್ಲಿ ಒಡಮೂಡುತ್ತಿದೆ.

## ೨.೪. ಗ್ರಾಮೀಣ ಸಂಪ್ರದಾಯಗಳು

### ೨.೪.೧. ಜೀತ ಪದ್ಧತಿ:

ಭಾರತೀಯ ಗ್ರಾಮೀಣ ಸಮಾಜದಲ್ಲಿ ಅನಾದಿ ಕಾಲದಿಂದಲೂ ಹಲವಾರು ಅನಿಷ್ಟ ಪದ್ಧಿತಿಗಳು ಆಚರಣೆಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ ಜಾತಿ ಪದ್ಧತಿ ಅಸ್ಪೃಶ್ಯತೆ, ಸಹಗಮನ ಪದ್ಧತಿ, ದೇವದಾಸಿ ಪದ್ಧತಿ. ಬಸವಿ ಪದ್ಧತಿ, ಜೀತ ಪದ್ಧತಿ ಮೊದಲಾದವು. ಜೀತ ಪದ್ಧತಿಯೂ ಶತ-ಶತಮಾನಗಳಿಂದ ಸತತವಾಗಿ ಆಚರಣೆಯಲ್ಲಿರುವ ಪದ್ಧತಿಯಾಗಿದೆ. ಅದು ಬಹಳ ಇತ್ತೀಚಿನವರೆಗೂ ಅಸ್ತಿತ್ವದಲ್ಲಿದ್ದು ಈಗ ಕಣ್ಮರೆಯಾಗುತ್ತಿರುವುದನ್ನು ಗುರುತಿಸಬಹುದಾಗಿದೆ.

ಸಾಮಾನ್ಯವಾಗಿ ಒಬ್ಬ ವ್ಯಕ್ತಿಯು ಒಬ್ಬ ಯಜಮಾನನಿಗೆ ಕೆಲವಾರು ನಿರ್ದಿಷ್ಟ ನಿಯಮಗಳಿಗೆ ಬದ್ಧನಾಗಿ ಹಗಲು-ರಾತ್ರಿ ಎನ್ನದೆ ಸತತವಾಗಿ ಸೇವೆ ಸಲ್ಲಿಸುವುದನ್ನು 'ಜೀತ' ಎನ್ನುತ್ತೇವೆ. ಗ್ರಾಮದ ಕಡು ಬಡವನು ತನ್ನ ಯಜಮಾನ ಅಥವಾ ಸಾಹುಕಾರನಿಂದ ಪಡೆದ ಸಾಲದ ಹಣಕ್ಕೆ ಇಲ್ಲವೇ ಅದರ ಬಡ್ಡಿಗಾಗಿ ಆ ಯಜಮಾನನ ಹಂಗಿನಲ್ಲಿ ಗುಲಾಮನಂತೆ ದುಡಿಯುವುದನ್ನು 'ಜೀತ ಪದ್ಧತಿ' ಎನ್ನುತ್ತೇವೆ. ಜೀತ ಪದ್ಧತಿಯ ನಿರ್ಮೂಲನಾ ಶಾಸನವು ೧೯೭೬ರಲ್ಲಿ ಜಾರಿಗೆ ಬಂದಿತು. ಜೀತ ಪದ್ಧತಿಯು ಒತ್ತಾಯದ ಇಲ್ಲವೇ ಬಲತ್ಕಾರದ ದುಡಿಮೆಯ ಪದ್ಧತಿಯಾಗಿದ್ದು ಸಾಲುಗಾರನು ಸಾಹುಕಾರನೋಡನೆ ಒಪ್ಪಂದದ ಮೇರೆಗೆ ಇರಬೇಕಾಗುತ್ತಿತ್ತು. ಸಾಲಗಾರನು ತಾನು ತೆಗೆದುಕೊಳ್ಳುವ ಸಾಲದ ಮೊತ್ತಕ್ಕೆ ಇಲ್ಲವೇ ತನ್ನ ವಂಶದ ಹಿರಿಯರು ಪಡೆದಿದ್ದ ಸಾಲಕ್ಕೆ ಪ್ರತಿಯಾಗಿ ಮತ್ತು ಅದಕ್ಕೆ ಪ್ರತಿಯಾಗಿ ನೀಡಬೇಕಾದ ಬಡ್ಡಿಗೆ ಪ್ರತಿಯಾಗಿ ಸಾಲಕೊಟ್ಟ ಸಾಹುಕಾರನ ಜೀತದಾಳಾಗುತ್ತಾನೆ. ಸಾಂಪ್ರದಾಯಿಕ ಇಲ್ಲವೇ ಸಾಮಾಜಿಕ ಋಣಕ್ಕೆ ಅನುಗುಣವಾಗಿ ವ್ಯಕ್ತಿಯ ದಾಸ್ಯವನ್ನು ಅನುಮೋದಿಸಿರುವುದು ಪೂರ್ವಿಕರ ಸಾಲಕ್ಕೆ ಪ್ರತಿಯಾಗಿ ಅವರ ಸಂತತಿಯವರು ಋಣಭಾರತ್ವದ ಉತ್ತರಾಧಿಕಾರತ್ವವನ್ನು ಮುಂದುವರಿಸಿಕೊಂಡು ಹೋಗುವುದು ಈ ಬಗೆಯ ಒಪ್ಪಂದವನ್ನು ಸಾಹುಕಾರನೊಡನೆ ಮಾಡಿಕೊಳ್ಳುವ ಇಲ್ಲವೇ ಇಂತಹ ಒಪ್ಪಂದವನ್ನು ಮಾಡಿಕೊಂಡಿರುವೆನೆಂದು ಭಾವಿಸಿದ ವ್ಯಕ್ತಿಯು ಸಾಲ ನೀಡಿದವನ 'ಜೀತದಾಳು' ಎನಿಸುತ್ತಾನೆ. ಸಾಲಗಾರನು ಇಲ್ಲವೇ ಆತನ ಪರವಾಗಿ ತನ್ನ ಶ್ರಮ ಅಥವಾ ದುಡಿಮೆಯನ್ನು ಒತ್ತೆ ಇಟ್ಟು ದುಡಿಯುವುದು ಜೀತ ಪದ್ಧತಿ ಎನಿಸುವುದು.

ಸಾಮಾನ್ಯವಾಗಿ ಜೀತದಾಳುಗಳಿಗೆ ನೀಡಲಾಗುವ ಕೂಲಿಯ ದರಗಳು ತುಂಬಾ ಕಡಿಮೆಯಾಗಿರುತ್ತದೆ. ಇದನ್ನೇ ಮಾರ್ಕ್ಸ್‌ವಾದ ಎತ್ತಿ ಹಿಡಿದಿದ್ದು ಅದರಿಂದ ಮನನೊಂದ ಮಾರ್ಕ್ಸ್ ತನ್ನ ಸಿದ್ಧಾಂತದ ಮೂಲಕವಾಗಿ ಬಂಡವಾಳಶಾಹಿಗಳ ವಿರುದ್ಧ ಅಧಿಕಾರ ಶಾಹಿಗಳ ವಿರುದ್ಧ ಭೂಮಾಲಿಕರ ವಿರುದ್ಧ ಸಿಡಿದೆದ್ದನು. ಕಾಲ ಬದಲಾದಂತೆ ಜೀತ ಪದ್ಧತಿಯು

ಸಹ ಬದಲಾವಣೆ ಹೊಂದಿ ಇತ್ತೀಚಿನ ದಿನಗಳಲ್ಲಿ ತನ್ನ ಸ್ವರೂಪ ವಿಭಿನ್ನತೆಯಿಂದ ಕೂಡಿದೆ. ಆಧುನಿಕತೆ, ತಾಂತ್ರಿಕತೆ ಬೆಳೆದಂತೆ ಜೀತ ಪದ್ಧತಿಯು ಕಡಿಮೆಯಾಗುತ್ತಿದೆ. ಕೆಲ ಹಳ್ಳಿಗಳಲ್ಲಿ ಇದ್ದರೂ ಸಹ ಅದು ಹಿಂದಿನಂತಿಲ್ಲ ಎಂಬುದು ಕಂಡುಬರುತ್ತದೆ.

### ೨.೪.೨. ಅವಿಭಕ್ತ ಕುಟುಂಬ:

ಭಾರತೀಯ ಗ್ರಾಮೀಣ ಸಮುದಾಯಗಳಲ್ಲಿ ಹಲವಾರು ವಿಶಿಷ್ಟ ಸಂಸ್ಥೆಗಳು ಕಂಡುಬರುತ್ತಿದ್ದು ಅವುಗಳಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆಯೂ ಒಂದು ಪ್ರಮುಖ ಸಂಸ್ಥೆಯಾಗಿದೆ. ಸಾಂಪ್ರದಾಯಿಕ ಭಾರತೀಯ ಹಿಂದೂ ಕುಟುಂಬ ವ್ಯವಸ್ಥೆಯು ಪಾಶ್ಚಿಮಾತ್ಯ ಕುಟುಂಬ ವ್ಯವಸ್ಥೆಗೆ ತುಂಬಾ ಭಿನ್ನವಾಗಿರುವುದು. ಭಾರತೀಯ ಸಾಮಾಜಿಕ ಕುಟುಂಬವು ಕೇವಲ ಪತಿ–ಪತ್ನಿ ಮತ್ತು ಅವರ ಮಕ್ಕಳನ್ನು ಮಾತ್ರ ಹೊಂದಿರದೆ, ಸಾಮಾನ್ಯವಾಗಿ ಪತಿಯ ತಂದೆ–ತಾಯಿಯರು, ಸಹೋದರರು ಅವರ ಪತ್ನಿಯರು, ಅವರ ಮಕ್ಕಳು, ಮೊಮ್ಮಕ್ಕಳು ಮೊದಲಾದವರನ್ನು ಹೊಂದಿರುತ್ತದೆ. ಅಂತಹ ಕುಟುಂಬವನ್ನು "ಅವಿಭಕ್ತ ಕುಟುಂಬ" ಎನ್ನುತ್ತೇವೆ. ಇದು ಭಾರತೀಯ ಸಾಮಾಜಿಕ ಜೀವನದ ವಿಶೇಷ ಲಕ್ಷಣವಾಗಿದ್ದು ಶತ–ಶತಮಾನಗಳವರೆಗೆ ಸತತವಾಗಿ ಸಾಗಿಬರುತ್ತಿರುವುದು. ಮಗನು ವಿವಾಹವಾದ ನಂತರ ತನ್ನ ಪತ್ನಿಯ ಜೊತೆ ಪ್ರತ್ಯೇಕವಾಗಿ ಕುಟುಂಬವನ್ನು ಸ್ಥಾಪಿಸದೆ ತನ್ನ ತಂದೆ ತಾಯಿಯರ ಮೂಲ ಕುಟುಂಬದಲ್ಲಿಯೇ ಮುಂದುವರಿಯುವನು ಕುಟುಂಬವು ಅವಿಭಕ್ತ ಸಂಯುಕ್ತ ಆಸ್ತಿಯುಳ್ಳದ್ದಾಗಿರುವುದು. ಪ್ರತಿಯೊಬ್ಬ ಸದಸ್ಯನಿಗೂ ಆ ಆಸ್ತಿಯಲ್ಲಿ ಪಾಲಿದ್ದು ಅದು ಆಗ ತಾನೇ ಹುಟ್ಟಿದ ಮಗುವಿಗೂ ಅನ್ವಯಿಸುವುದು. ಕುಟುಂಬದಲ್ಲಿ ದುಡಿಯುವ ಪ್ರತಿಯೊಬ್ಬ ಸದಸ್ಯನ ಪ್ರತಿದಿನದ ಗಳಿಕೆಯೂ ಕುಟುಂಬದ ಸಾಮಾನ್ಯ ಖಜಾನೆಗೆ ಅಥವಾ ನಿಧಿಗೆ ಸೇರಲ್ಪಟ್ಟ ತನ್ಮೂಲಕ ಕುಟುಂಬದ ಖರ್ಚುವೆಚ್ಚಗಳು ಪೂರೈಸಲ್ಪಡುತ್ತವೆ. ದುಡಿಯದಿರಬಹುದಾದ ಸದಸ್ಯರಿಗೂ ದುಡಿಯುತ್ತಿರುವ ಸದಸ್ಯರಿಗಿರುವಷ್ಟೇ ಸಮಾನ ಪಾಲಿರುವುದು. ಅಂತೆಯೇ ಭಾರತೀಯ ಕುಟುಂಬ ವ್ಯವಸ್ಥೆಯು ಪ್ರತಿಯೊಬ್ಬರೇ ತಮ್ಮ ಶಕ್ತಿ ಸಾಮರ್ಥ್ಯಗಳಿಗನುಗುಣವಾಗಿ ದುಡಿಯುವ ಹಾಗೂ ಅಗತ್ಯಗಳಿಗನುಗುಣವಾಗಿ ಹಾಗೂ ಅವಶ್ಯಕತೆಗಳಿಗನುಗುಣವಾಗಿ ಪಡೆಯುವ ಅವಕಾಶವಿರುವ ಸಮಾಜವಾದಿ ಸಮುದಾಯವನ್ನು ಬಹಳ ಮಟ್ಟಿಗೆ ಹೋಲುವುದು.

### ೨.೪.೩. ಅವಿಭಕ್ತದ ಮೂಲ:

ಅವಿಭಕ್ತಿ ಕುಟುಂಬ ವ್ಯವಸ್ಥೆಯು ಭಾರತೀಯ ಹಿಂದೂ ಸಮಾಜದಲ್ಲಿ ವ್ಯಾಪಕವಾಗಿ ಕಂಡು ಬರುತ್ತಿರುವುದರಿಂದಾಗಿ ಅದು ಭಾರತದಲ್ಲಿಯೇ ಜನ್ಮತಾಳಿದೆ ಎಂದು ಭಾವಿಸುವುದು ನಿಜವಾದರೂ ವಸ್ತುಸ್ಥಿತಿ ಹಾಗಲ್ಲ, ಅದು ಆರ್ಯರ ಜೀವನ ವ್ಯವಸ್ಥೆಯ ಮೂಲದಿಂದಾಗಿದ್ದು. ಅವರು ವಿವಿಧ ಕಡೆಗಳಲ್ಲಿ ನೆಲೆಸಲಾಗಿ ಅಲ್ಲಲ್ಲಿ ಅಸ್ತಿತ್ವಕ್ಕೆ ಬಂದಿದೆ. ಅದರ ತದ್ರೂಪವಲ್ಲದಿದ್ದರೂ ಬಹಳ ಮಟ್ಟಿಗೆ ಅವರ ಮೂಲ ಸ್ವರೂಪವನ್ನೇ ಹೋಲುವ ಸಂಸ್ಥೆಗಳನ್ನು

ಜಗತ್ತಿನಾದ್ಯಂತ ಕಾಣಬಹುದಾಗಿದೆ. ಪ್ರಾಚೀನ ರೋಮ್ ಸಮಾಜದಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆಯು ಆಚರಣೆಯಲ್ಲಿದುದ್ದಾಗಿ ತಿಳಿದು ಬಂದಿದೆ. ಮಾನವ ತನ್ನ ಬೇಟೆ ಹಾಗೂ ಪಶುಪಾಲನೆಯ ಹಂತಗಳನ್ನು ದಾಟಿ, ಕೃಷಿಯನ್ನವಲಂಬಿಸಿ ಸ್ಥಿರವಾದ ನೆಲೆಗಳಲ್ಲಿ ನೆಲೆಸಲು ಆರಂಭಿಸಿದಾಗಿನಿಂದ ಅವಿಭಕ್ತ ಕುಟುಂಬ ಅಸ್ತಿತ್ವಕ್ಕೆ ಬಂದಿದೆ. ಸಂಪರ್ಕ ಹಾಗೂ ಸಮಾಚಾರ ಸಾಧನಗಳ ಕೊರತೆ ಕುಟುಂಬದ ಎಲ್ಲ ಸದಸ್ಯರೂ ಒಟ್ಟುಗೂಡಿ ಜೀವಿಸಲು ಪ್ರೇರೆಪಿಸಿದೆ. ರಕ್ತಸಂಬಂಧ, ಪಿತೃಪೂಜೆ, ಧಾರ್ಮಿಕ ಆಚರಣೆ ಮೊದಲಾದವು ಸೇರಿದಂತೆ ಆರ್ಥಿಕ ಹಾಗೂ ಅಧ್ಯಾತ್ಮಿಕ ಅಗತ್ಯಗಳು ಸುತ್ತುವರಿದಂತೆ ಸಂಕೀರ್ಣ ಅವಿಭಕ್ತ ಕುಟುಂಬಗಳನ್ನುಳ್ಳ ಸಮಾಜವು ರೂಪಗೊಂಡಿದೆ. ಅವಿಭಕ್ತ ಕುಟುಂಬವು ಜಗತ್ತಿನ ಇತರ ಕಡೆ ಬಹಳ ಮಟ್ಟಿಗೆ ನಶಿಸಿದ್ದರೂ ಭಾರತದಲ್ಲಿ ಔದ್ಯೋಗೀಕರಣದಿಂದ ಬಾರಿ ಪೆಟ್ಟು ತಿಂದಿದ್ದರೂ ಇಂದಿಗೂ ವ್ಯಾಪಕವಾಗಿ ಅಸ್ತಿತ್ವದಲ್ಲಿರುವುದು ಕಂಡು ಬರುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ವಿಶೇಷವಾಗಿ ಬೆರೆತು ಮಹತ್ವ ಪೂರ್ಣ ಅಂಶವಾಗಿ ಜನಜೀವನದಲ್ಲಿ ಆಳವಾಗಿ ಬೇರು ಬಿಟ್ಟಿರುವುದು ಕಂಡುಬರುತ್ತದೆ.

ಭಾರತೀಯ ಗ್ರಾಮ ಸಮಾಜದಲ್ಲಿ ಕಂಡು ಬರುವಂತಹ ಅವಿಭಕ್ತ ಕುಟುಂಬಗಳು ತನ್ನದೇ ಆದಂತಹ ಪರಿಕಲ್ಪನೆಗಳನ್ನು ಒಳಗೊಂಡಿರುತ್ತವೆ. ಕುಟುಂಬದಲ್ಲಿ ಮೂರು ಇಲ್ಲವೆ ಹೆಚ್ಚು ತಲೆಮಾರಿನವರಿರುತ್ತಾರೆ. ಇವರ ಮನೆಗಳು ಸಾಮಾನ್ಯವಾಗಿ ಮಾಳಿಗೆ ಅಥವಾ ಮೇಲ್ಛಾವಣಿಯನ್ನು ಹೊಂದಿದ್ದು, ಅವರಲ್ಲಿ ತಂದೆ-ತಾಯಿ, ಮಗ, ಮಗಳು, ಮೊಮ್ಮಕ್ಕಳು, ಅಜ್ಜ-ಅಜ್ಜಿ ಮುಂತಾದವರು ಒಂದೇ ಛಾವಣೆಯ ಮೇಲೆ ವಾಸಿಸುವ ಮಲಗುವ ಪರಿಪಾಠವಿದೆ. ಇದಕ್ಕೆ ಕಾರಣವೆಂದರೆ ಜನಸಂಖ್ಯೆ ಹೆಚ್ಚಳ ಇತ್ತೀಚಿನ ಗ್ರಾಮಗಳಲ್ಲಿ ಅವಿಭಕ್ತ ಗ್ರಾಮಗಳು ಕೇವಲ ಬೆರಳೆಣಿಕೆಯಷ್ಟು ಮಾತ್ರ ಇದ್ದರೂ ಸಹ ಮನೆಯಲ್ಲಿ ಮುಖ್ಯಸ್ಥರಿಗೆ ಮಾನಸಿಕವಾಗಿ ನೆಮ್ಮದಿಯಿರುವುದಿಲ್ಲ. ಏಕೆಂದರೆ ಮನೆಯಲ್ಲಿ ದುಡಿಯುವವರ ಸಂಖ್ಯೆ ಕಡಿಮೆ ಇದ್ದಾಗ ಇಂತಹ ಸಮಸ್ಯೆಗಳು ಬರುತ್ತವೆ. ಮನೆಯ ಮುಖ್ಯಸ್ಥನಾದವನು ಪ್ರತಿಯೊಬ್ಬರನ್ನು ಸಮಾನ ಧರ್ಮದಿಂದ ನೋಡಬೇಕಾಗಿರುತ್ತದೆ. ಅದರ ಪ್ರಯುಕ್ತ ಮನೆಯಲ್ಲಿ ದಿನನಿತ್ಯದ ಊಟದ ವ್ಯವಸ್ಥೆಗೆ ಹಣ ಹೊಲದಲ್ಲಿ ನೋಡಿಕೊಳ್ಳುವ ವ್ಯವಸ್ಥೆ ಎಲ್ಲರ ಮಕ್ಕಳಿಗೆ ಶಿಕ್ಷಣ ಕೊಡಿಸುವ ಕಾರ್ಯ ಮನೆಯ ಒಡೆಯನದಾಗಿರುತ್ತದೆ. ಹಬ್ಬ-ಹರಿದಿನಗಳು, ಜಾತ್ರೆಗಳ ಸಂದರ್ಭದಲ್ಲಿ ಪ್ರತಿಯೊಬ್ಬರಿಗೂ ಬಟ್ಟೆಯ ವ್ಯವಸ್ಥೆ ಮಾಡಬೇಕಾಗಿರುತ್ತದೆ. ಈ ಎಲ್ಲಾ ಸಮಸ್ಯೆಗಳಿಂದ ಮನೆಯ ಒಡೆಯನು ಮಾನಸಿಕವಾಗಿ ಕುಂದಿ ಕುಟುಂಬ ವ್ಯವಸ್ಥೆಯನ್ನು ನೀಗಿಸಿಕೊಂಡು ಹೋಗುವುದರಲ್ಲಿ ವಿಫಲತೆಯನ್ನು ಕಾಣುತ್ತಿದ್ದಾನೆ. ಸರ್ಕಾರಗಳ ವ್ಯವಸ್ಥೆಯಿಂದ ಕೆಲ ಯೋಜನೆಗಳನ್ನು ಜಾರಿಯಲ್ಲಿ ತಂದಿರುವುದರಿಂದ ವಸತಿಯ ಸಮಸ್ಯೆ ಇತ್ತೀಚೆಗೆ ಕಂಡು ಬರುತ್ತಿಲ್ಲ. ಮನೆಯ ಸದಸ್ಯರ ಸಮಸ್ಯೆಯಿಂದ ಆರ್ಥಿಕ ತೊಂದರೆಯಿಂದ ಇನ್ನೂ ಮುಂತಾದ ಸಮಸ್ಯೆಗಳಿಂದ ಇತ್ತೀಚೆಗೆ ಅವಿಭಕ್ತ ಕುಟುಂಬಗಳು ಒಡೆದು ಹೋಗುತ್ತಿರುವುದನ್ನು ಕಾಣುತ್ತಿದ್ದೇವೆ.

### ೨.೪.೪. ವಿವಾಹ:

ಸಾಧರಣವಾಗಿ ವಿವಾಹ ಸಂಸ್ಥೆಯನ್ನು ದೇವರೇ ಏರ್ಪಡಿಸಿದನೆಂದೂ ಆದುದರಿಂದ ಇದು ಅನಾದಿ ಎಂದೂ ಬಹುಮಂದಿ ನಂಬುತ್ತಾರೆ. ಆದರೆ ವಿವಾಹ ಪದ್ಧತಿಯನ್ನು ಮಾನವನೇ ಕಲ್ಪಿಸಿಕೊಂಡನೆಂಬ ಅಂಶಕ್ಕೆ ಅನೇಕ ಪ್ರಾಚೀನ ಐತಿಹ್ಯಗಳು ದೊರೆಯುತ್ತವೆ. ಇದನ್ನು ಹಿಂದೂಗಳಲ್ಲಿ ಶ್ವೇತಕೇತು ಎಂಬುವನೂ (ಮಹಾಭಾರತ-ಆದಿಪರ್ವ) ಚೀನಾದಲ್ಲಿ ಫೌ-ಏ ಎಂಬ ಸಾಮ್ರಾಟನೂ, ಗುಪ್ತರಲ್ಲಿ ಮೆನೀಸನೂ, ಗ್ರೀಕ್‌ರಲ್ಲಿ ಸೆಕ್ರೋಪೀಸನೂ, ಲಾಪ್ಸ್ ಜನರಲ್ಲಿ ಜೆಎಸ್ ಮತ್ತು ಅಬ್ಜಿಸ್ ಎಂಬುವರೂ ಸ್ಥಾಪನೆ ಮಾಡಿದರೆಂದು ಇತಿಹಾಸಗಳುಂಟು. 'ವಿವಾಹ ಸಂಸ್ಥೆಯನ್ನು ಒಂದು ನಿರ್ದಿಷ್ಟ ಕಾಲದಲ್ಲಿ ಯಾವೊಬ್ಬ ವ್ಯಕ್ತಿಯೂ ಸೃಜಸಲಿಲ್ಲ' ನಾವು ಸಾಧ್ಯವಾದ ಮಟ್ಟಿಗೆ ಇದರ ಜಿಜ್ಞಾಸೆಯ ತೊಡಕುಗಳನ್ನು ಬಿಡಿಸಿಕೊಂಡು ಅದರ ಸಾರಾಂಶವನ್ನು ಮಾತ್ರ ಸಂಗ್ರಹಿಸಲು ಪ್ರಯತ್ನಿಸಬೇಕು. ಈ ಜಿಜ್ಞಾಸೆಯಲ್ಲಿ ಈಗಿನ ಪಂಡಿತರು ಪರೀಕ್ಷಿಸುವ ಅಂಶಗಳಾವುವೆಂದರೆ ವಿವಾಹವೆಂದರೆನು? ಇದು ಲೋಕದಲ್ಲಿ ಅನಾದಿಯಾಗಿ ನಡೆದುಬರುತ್ತಿದೆಯೇ? ಇಲ್ಲದಿದ್ದಲ್ಲಿ ಯಾವುದೋ ಒಂದು ಅವಸ್ಥೆಯಲ್ಲಿ ಮಾತ್ರ ಹುಟ್ಟಿರುವುದೇ? ಹಾಗೆ ಹುಟ್ಟಿದ್ದರೆ ಯಾವ ಅವಸ್ಥೆಯಲ್ಲಿ ಹುಟ್ಟಿತು? ಇದರ ಆದಿಕಾಲದ ರೂಪಯಾವುದು? ಈ ರೂಪ ಕ್ರಮವಾಗಿ ಬದಲಾಯಿಸುತ್ತ ಬಂದ ಬಗೆ ಹೇಗೆ? ವಿವಾಹ ಸಂಸ್ಥೆ ಹುಟ್ಟಲು ಕಾರಣವೇನು? ವಿವಾಹಕ್ಕೂ ಕುಟುಂಬಕ್ಕೂ ಇರುವ ಸಂಬಧವೇನು? ಈ ಅಂಶಗಳೆಲ್ಲವೂ ಪರಸ್ಪರವಾಗಿ ಸಂಬಂಧಪಟ್ಟಿರುವುದರಿಂದ ಇವುಗಳೇ ಒಂದು ಅಭಿಪ್ರಾಯವನ್ನು ಮಾಡಿಕೊಂಡರೆ ಮಿಕ್ಕ ಅಂಶಗಳಲ್ಲಿಯೂ ಅದೇ ರೀತಿಯ ಅಭಿಪ್ರಾಯ ಏರ್ಪಡುವುದು.

ವಿವಾಹವೆಂದರೇನು? ೧೮೬೬ರಲ್ಲಿ ಇಂಗ್ಲೆಂಡಿನ ನ್ಯಾಯಾಲಯದಲ್ಲಿ ಹೈಡ್ ಮತ್ತು ಹೈಡ್ ಎಂಬ ವ್ಯಾಜ್ಯದ ತೀರ್ಮಾನದಲ್ಲಿ ವಿವಾಹವೆಂದರೆ "ಒಬ್ಬ ಪುರುಷನಿಗೂ ಒಬ್ಬಳು ಸ್ತ್ರೀಗೂ ಜೀವಾವದಿ ಉಂಟಾಗುವ ಸಮ್ಮೇಳನವೆಂದು" ಅರ್ಥ ಮಾಡಲಾಯಿತು. ಇಂತಹ ಸಮ್ಮೇಳ ಸಮಾಜ ಒಪ್ಪತಕ್ಕಂತಹ ಒಂದು ಕ್ಲುಪ್ತ ಕ್ರಮದಲ್ಲಿ ಉಂಟಾಗಬೇಕು. ಹಿಂದೂಗಳಲ್ಲಿ ಇದು ಅಗ್ನಿ ಸಾಕ್ಷಿಯಾಗಿ ಬಾಹ್ಮ ವಿವಾಹ ಕ್ರಮದಲ್ಲಿ ನಡೆಯುವುದು. ಮುಸಲ್ಮಾನರಲ್ಲಿ ಎರಡು ಪಕ್ಷದ ಸಾಕ್ಷಿಗಳ ಎದುರಿಗೆ ಪರಸ್ಪರ ಕರಾರಿನಿಂದ ಏರ್ಪಡುವುದು ಹೀಗೆ ಉಂಟಾಗತಕ್ಕ ಸಂಬಂಧ ಒಂದು ಕ್ಲುಪ್ತ ಕ್ರಮದಲ್ಲಿ ಮುಂದುವರಿಯಬಹುದು.

"ಹೆಣ್ಣಿಲ್ಲಿದವ ಸಂಸಾರ ಮರದೊಳಗೆ ಎಣ್ಣೆ ಹೊಯ್ದಂತೆ"

"ಪುರುಷನಿಲ್ಲದವಳು ಬಾಳುವೆ ನೀರೊಳಕ್ಷರವ ಬರೆದಂತೆ"

ಸ್ತ್ರೀ-ಪುರುಷರಿಬ್ಬರೂ ಒಬ್ಬರ ಕಣ್ಣಿಗೊಬ್ಬರು ಬೆಳಕಾಗಿ ಹಕ್ಕಿಯ ಎರಡು ರೆಕ್ಕೆಗಳಂತೆ ಸಹಕರಿಸಿದರೆ ಇಬ್ಬರಿಗೂ ಶಾಂತಿ, ಶ್ರೇಯಸ್ಸು. ಇದು ಪ್ರಕೃತಿ ಧರ್ಮ. ಅಲ್ಲದೆ ನಿಸರ್ಗ ನಿಯಮವನ್ನು ಮೀರುವುದು ಸಾಧ್ಯವಿಲ್ಲದಿರುವುದೇ ಈ ಸಂಸಾರವೆಂಬ ಮೊಹದ ಸುಳಿಗೆ ಸಿಕ್ಕಿ ಹಾಕಿಕೊಳ್ಳಲು ಅತ್ಯಂತ ಪ್ರಮುಖ ಕಾರಣ.

ಇದರ ಗುರಿ ಒಂದು ಗಿಡದ ರೆಂಬೆಯನ್ನು ಇನ್ನೊಂದು ಗಿಡಕ್ಕೆ ಅಂಟಿಸಿ, ರೆಂಬೆ ಗಿಡದೊಳಗೆ ಐಕ್ಯವಾಗುವಂತೆ ಮಾಡುವುದು. ಮೊದಲೇ ಹೇಳಿರುವಂತೆ ಸಂಪ್ರದಾಯ, ಧರ್ಮ ಎಂಬ ಹಗ್ಗಗಳ ಮಣಿಯೆಂಬ ಅದಕ್ಕಿರುವುದೇ ಅದು ತನ್ನ ಎಲ್ಲೆಯನ್ನು ದಾಟಿ ಹೋಗದಂತೆ ಮಾಡಿರುವ ಸಂಜೀವಿನಿಯಾಗಿದೆ. ಇದೊಂದು ಧರ್ಮ ಬಂಧನ. ಈ ಕಾರಣದಿಂದಲೇ 'ವಿವಾಹ' ಎನ್ನುವ ಶಬ್ದ ತನ್ನ ಗೌರವವನ್ನು ಇದುವರೆಗೂ ಕಾಪಾಡಿಕೊಂಡು ಬಂದಿದೆ. ಆದರೆ ಕಾಲಕಾಲಕ್ಕೆ ಸ್ಥಳೀಯ ವಾತಾವರಣಕ್ಕೆ ತಕ್ಕಂತೆ ರೂಢಿ, ಪದ್ಧತಿಗಳಲ್ಲಿ ಬದಲಾವಣೆಗಳು ಕಂಡು ಬರುತ್ತವೆ. ವಿವಾಹದ ರೀತಿ-ನೀತಿಗಳು ಮಾರ್ಪಾಡು ಹೊಂದುತ್ತಲಿದ್ದರೂ ಈ ಸಂಸ್ಥೆಗೆ ಕುಂದು ಬಂದಿಲ್ಲ.

ಹಿಂದಿನ ಕಾಲಗಳಲ್ಲಿ ವಿವಾಹವು ಸಡಗರ ಸಂಭ್ರಮದಿಂದ ಸುಮಾರು ೫ ರಿಂದ ೭ ದಿನಗಳವರೆಗೆ ನಡೆಯುತ್ತಿತ್ತು. ವಿವಾಹದ ತಯಾರಿಯು ತಿಂಗಳ ಮುಂಚೆಯೇ ಪ್ರಾರಂಭವಾಗುತ್ತಿತ್ತು. ನಂಟರಿಷ್ಟರು ಎರಡು, ಮೂರು ದಿನಗಳ ಮುಂಚೆಯೇ ಮದುವೆ ಮನೆಗೆ ದಾವಿಸುತ್ತಿದ್ದರು. ಮದುವೆ ಮನೆಯಲ್ಲಿ ಎಲ್ಲಾ ಕಾರ್ಯಗಳಲ್ಲಿ ಸಮಬಾಗಿಗಳಾಗಿ ಕೆಲಸದಲ್ಲಿ ನಿರತರಾಗುತ್ತಿದ್ದರು. ಅಂದಿನ ವಿವಾಹಕ್ಕೆ ಮುಖ್ಯಸ್ಥರಾಗಿ ಎರಡು ಊರುಗಳ (ವರ-ವಧು) ಗೌಡರು ಬರುತ್ತಿದ್ದುದು ವಾಡಿಕೆಯಾಗಿದೆ. ವಿವಾಹವಾಗುವಂತಹ ವಧುವಿಗೂ, ತನ್ನ ಕರಳು ಬಳ್ಳಿಯನ್ನು ಕಳಚಿ ಕಳಿಸಬೇಕಲ್ಲಾ ಎನ್ನುವ ವಧುವಿನ ತಾಯಿಗೂ ಒಳಗೊಳಗೆ ದುಃಖ ಸಂಕಟ ರಾರಾಜಿಸುತ್ತಿರುತ್ತಾರೆ. ವಿವಾಹವಾದ ನಂತರದಲ್ಲಿ ವಧುವಿನ ತಂದೆ-ತಾಯಿಗಳು ಮಗಳಿಗೆ ಉಡಕ್ಕಿಯನ್ನು ಹಾಕುವರು. ಆಕೆಯು ಆಗ ತನ್ನ ಕರಳು ಕಿತ್ತು ಬರುವ ಹಾಗೆ ತನ್ನ ದುಃಖವನ್ನು ತನ್ನ ತಂದೆ-ತಾಯಿಗಳ ಹತ್ತಿರ ಹಂಚಿಕೊಳ್ಳುತ್ತಿದ್ದಳು. ಈ ಒಂದು ಸನ್ನಿವೇಶವನ್ನು ಕಂಡು ನಮ್ಮ ಜನಪದ ಗಾಯಕಿ ಹೀಗೆ ಹಾಡಿದ್ದಾನೆ.

"ಹುಡಿಯಕ್ಕಿ ಹಾಕುವರು ನಡಿಯವ್ವ ನನಮಗಳ
ಅಂಗಳದ ತುಂಬಾ ಅಳಬ್ಯಾಡ
ವಾರೀಗಿ ಗೆಳೆತಯ ಕಳುವಾಕಿ ಬರುವಾರು
ಊರಗಸಿ ತನಕ ನಿನ ಜೋಡ
ಆ ಬಸವಣ್ಣಗ ಶರಣ ಮಾಡವ್ವ
ಬಂಡಿಯತ್ತಿ ನೀನ ಬಳಗ ಕೊಡವ್ವ"

ದುಃಖಿತಳಾದಂತಹ ಮದುಮಗಳು ಸೀರೆಯಲ್ಲಿ ಉಡಿಯಕ್ಕಿಯನ್ನು ಹಾಕಿಕೊಂಡು ತನ್ನ ಚಿಕ್ಕಪ್ಪ, ಚಿಕ್ಕವ್ವ, ಅಣ್ಣ, ತಂಗಿ, ತಮ್ಮ, ಮಾವಂದಿರನ್ನು ಊರಿನ ಪ್ರತಿಯೊಂದು ಮನೆಗೆ ಬೇಟಿ ನೀಡಿ ಅವರಿಂದ ಆರ್ಶಿವಾದವನ್ನು ಪಡೆದುಕೊಂಡು ಹೋಗುತ್ತಿದ್ದಳು. ಆದರೆ ಈಗಿನ ವಿವಾಹಗಳು ಒಂದು ದಿನ ನಡೆಯುತ್ತವೆ. ವಿವಾಹಗಳು, ಕೇವಲ ಒಂದು ಅಥವಾ ಎರಡು ದಿನಗಳಲ್ಲಿಯೇ ಪೂರ್ವಭಾವಿಯಾಗಿ ತಯಾರಾಗಿ ಹೆಣ್ಣು ಗಂಡುಗಳನ್ನು ಕರೆದುಕೊಂಡು ಒಂದೇ ದಿನಗಳಲ್ಲಿ ವಿವಾಹವನ್ನು ಮುಗಿಸುತ್ತಾರೆ. ಇಂತಹ ವಿವಾಹಗಳಲ್ಲಿ ತಂದೆ-ತಾಯಿ-

ಬಂಧು-ಬಳಗ-ಊರಿನ ಸ್ನೇಹಿತ-ಸ್ನೇಹಿತೆಯರ ಯಾರೊಬ್ಬರ ಆಸರೆ ಸಹಕಾರ ಮಾತು ಕತೆಗಳಿಲ್ಲದೇ ವಿವಾಹಗಳು ನಡೆದು ಹೋಗುತ್ತವೆ. ಶಿಕ್ಷಣ ಪಡೆದ ಇಂದಿನ ಜನ ವಿವಾಹದ ನೀತಿ-ನಿಯಮಗಳನ್ನು ಆಚಾರ-ವಿಚಾರಗಳನ್ನು ಬದಿಗೊತ್ತುತ್ತಿದ್ದಾರೆ. ಇಂದಿನ ವಿವಾಹಗಳು ವಧು-ವರರ ತಂದೆ-ತಾಯಿಗಳಿದ್ದರೆ ಸಾಕು ವಿವಾಹಗಳಾಗುತ್ತವೆ. ಆದರೆ ಹಿಂದಿನ ಕಾಲದಲ್ಲಿ ತನ್ನ ತಂದೆಯ ಬಳಗ, ತಾಯಿಯ ಬಳಗ ಪ್ರತಿಯೊಬ್ಬರನ್ನು ಕರೆದು ಎಲ್ಲರೂ ಸಹಬಾಳ್ವೆಯಿಂದ ಮದುವೆ ಮಾಡಿ ವಧು-ವರರಿರ್ವರನ್ನು ಆಶಿರ್ವಾದಿಸುತ್ತಿದ್ದರು.

ಅಂದಿನ ಕಾಲದಲ್ಲಿ ವರನನ್ನು ನೋಡಲು, ವಧುವನ್ನು ನೋಡಲು ತಂದೆ-ತಾಯಿಗಳಿಬ್ಬರು ಬಂಧು-ಬಳಗದವರು ನೋಡಿಕೊಂಡು ಬಂದು ಒಪ್ಪಿಕೊಂಡರೆ ವಿವಾಹಗಳು ಜರುಗುತ್ತಿದ್ದವು. ಆದರೆ ಇಂದಿನ ಕಾಲದ ವಿವಾಹಗಳು ಸಂಪ್ರದಾಯಗಳನ್ನು ಮುರಿದು ವಧುವನ್ನು-ವರ ಫಿಕ್ಸ್ ಮಾಡಿಕೊಂಡಿರುತ್ತಾನೆ. ಹಾಗೆಯೇ ವಧುವು ಕೂಡ ಮುಂಚಿತವಾಗಿಯೇ ಇಬ್ಬರ ಕೊರಿಕೆಯ ಮೇರೆಗೆ ಒಂದಾಗಿ ಕೊನೆಯಲ್ಲಿ ವಿವಾಹದ ವಿಷಯ ಬಂದಾಗ ತಂದೆ-ತಾಯಿಗಳ ಮೋರೆ ಹೋಗಿ ಒಂದೇ ದಿನದಲ್ಲಿ ವಿವಾಹವಾಗುವ ಸಾಧ್ಯತೆಗಳು ಬಹಳ ಕಂಡು ಬರುತ್ತಿವೆ. ಆಧುನಿಕತೆ, ತಾಂತ್ರಿಕತೆ ಮುಂದುವರೆದಂತೆ ಸಮಾಜದ ಪ್ರತಿಯೊಂದು ಅಂಶಗಳು ಸಹ ಬದಲಾವಣೆಯ ಹಾದಿ ಹಿಡಿದು ವಿದೇಶಿಯತೆಯನ್ನು ಮೈಗೂಡಿಸಿಕೊಳ್ಳುತ್ತಿವೆ. ವಿವಾಹದ ಮೊದಲೇ ಕೂಡಿಕೆಯಿಂದ ಒಂದೇ ದಿನದಲ್ಲಿ ವಿವಾಹವಾಗಿ ಕೊನೆಗೆ ಮುಂದೊಂದು ದಿನ ವಿದೇಶಿಯರಂತೆ ವಿವಾಹ ವಿಚ್ಛೇದನಕ್ಕೆ (ಡೈವರ್ಸ್) ಮುಂದಾಗುತ್ತಾರೆ. ವಿವಾಹವೆಂಬುದು ಸಮಾಜಿಕವಾದಂತಹ ಅನುಭಂದವೆಂದು ತಿಳಿದುಕೊಳ್ಳದೇ ಇಂದಿನ ಜನತೆಯು ವಿವಾಹವನ್ನು ಒಂದು ಭೂಟಾಟಿಕೆಯ ಮಾತಾಗಿ ತೆಗೆದುಕೊಳ್ಳುತ್ತಿದ್ದಾರೆ. ಇದು ನಗರ ಪ್ರದೇಶಗಳಲ್ಲಿದ್ದರೆ, ಇತ್ತೀಚೆಗೆ ಹಳ್ಳಿಗಳ ಕಡೆಗೂ ಧಾವಿಸುತ್ತಿದೆ. ಹಳ್ಳಿಗಳಲ್ಲಿ ವಿವಾಹವು ತನ್ನ ಸ್ವರೂಪವನ್ನು ಬದಲಾವಣೆ ಮಾಡಿಕೊಂಡಿವೆ.

**೨.೪.೫. ಗ್ರಾಮೀಣ ದೇವಾಲಯಗಳು:**

ಗ್ರಾಮೀಣ ಪ್ರದೇಶಗಳಲ್ಲಿ ದೇವಾಲಯಗಳು ಮಹತ್ವ ಪೂರ್ಣ ಪಾತ್ರ ವಹಿಸುತ್ತವೆ. ಅವು ಗ್ರಾಮೀಣ ಜನರ ಬದುಕನ್ನು ರೂಪಿಸುವುದರಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿವೆ. ಭಾರತದಲ್ಲಿ ಗ್ರಾಮಗಳಿಗಿರುವುದು ಎಷ್ಟು ಸತ್ಯವೋ ಆ ಗ್ರಾಮಗಳಲ್ಲಿ ದೇವಸ್ಥಾನಗಳಿರುವುದು ಅಷ್ಟೇ ಸತ್ಯ ಸಾಮಾನ್ಯವಾಗಿ ದೇವಸ್ಥಾನವಿಲ್ಲದ ಗ್ರಾಮವೇ ಇಲ್ಲವೆನ್ನಬಹುದು. ಆ ದೇವಸ್ಥಾನವು ವೈಭವಪುರಿತ ಭವ್ಯ ಕಟ್ಟಡವನ್ನು ಉಳ್ಳದ್ದಾಗಿರುತ್ತದೆ. ಎಂಬ ಖಾತರಿ ಇಲ್ಲ. ಆದರೆ ಗ್ರಾಮದ ಮಧ್ಯ ಭಾಗದಲ್ಲಿ ಇಲ್ಲವೇ ಯಾವುದೋ ಒಂದು ಕಡೆ ಒಂದು ಕಲ್ಲು ಕಂಬವನ್ನು ನಿಲ್ಲಿಸಿಯೋ ಚಪ್ಪರವನ್ನು ಹಾಕಿಯೋ, ಮಂಟಪವನ್ನು ಕಟ್ಟಿಯೋ, ಗುಡಿಸಲು ನಿರ್ಮಿಸಿಯೋ ದೇವಾಲಯವನ್ನು ಕಟ್ಟಿಯೋ ಇದು ಈ ಗ್ರಾಮ ದೇವಾಲದ ತಾಣ ಎಂಬುದಾಗಿ ಪರಿಗಣಿಸಲಾಗಿರುವುದು ಸಾಮಾನ್ಯವಾಗಿ ಇಡೀ ಭಾರತದಾದ್ಯಂತ ಕಂಡುಬರುತ್ತದೆ.

ಭಾರತೀಯ ಗ್ರಾಮಗಳಲ್ಲಿ ದೇವಸ್ಥಾನವು ಕೇವಲ ದೇವಾಲಯವಾಗಿರದೆ ಇಡೀ ಗ್ರಾಮದ ಬಹುತೇಕ ಚಟುವಟಿಕೆಗಳ ಪ್ರಮುಖ ಕೇಂದ್ರವೂ, ಪ್ರಚೋದಕವೂ ಆಗಿರುತ್ತದೆ. ಅದು ಜನರು ಬಂದು ಪ್ರಾರ್ಥನೆ ಮಾಡುವ ಮತ್ತು ಪೂಜೆ ಪುನಸ್ಕಾರಗಳನ್ನು ಸಲ್ಲಿಸುವ ತಾಣವಾಗಿದೆ. ಇಡೀ ಗ್ರಾಮದ ಆಗು ಹೋಗುಗಳನ್ನು ನಿರ್ಧರಿಸುವ ಮತ್ತು ನಿರ್ದೇಶಿಸುವ ಪ್ರಮುಖ ಕೇಂದ್ರವಾಗಿರುತ್ತದೆ.

ದೇವಾಲಯವು ಗ್ರಾಮದ ಒಂದು ಪಾಠಶಾಲೆಯೋಪಾದಿಯಲ್ಲಿ ಸೇವೆ ಸಲ್ಲಿಸುತ್ತದೆ. ಭಾರತೀಯರು ಗ್ರಾಮಗಳ ದೇವಾಲಯಗಳಲ್ಲಿಯೇ ಕಿರಿಯ ಪೀಳಿಗೆಯ ಮಕ್ಕಳಿಗೆ ಶಿಕ್ಷಣ ಕೊಡುವ ಕಾರ್ಯ ಶತ-ಶತಮಾನಗಳಿಂದಲೂ ಸಾಗಿ ಬಂದಿದೆ. ಆ ನೆಲೆಗಳಲ್ಲಿಯೇ ಉತ್ತಮ ಜಾತಿಯ ಮಕ್ಕಳು ಧಾರ್ಮಿಕ ಹಾಗೂ ಲೌಕಿಕ ಶಿಕ್ಷಣವನ್ನು ಪಡೆಯುತ್ತಿದ್ದರು. ಶಾಲೆಗಳನ್ನು ಮಠಗಳು ಎಂಬುದಾಗಿ ಕರೆಯುವ ಪರಿಪಾಠ ಈಗಲೂ ಇದೆ. ದೇವಾಲಯಗಳಲ್ಲಿ ಹರಿಕಥೆ, ಪುರಾಣ ಪುಣ್ಯಕಥೆ, ಭಜನೆ ಇವೇ ಮೊದಲಾದ ವಿವಿಧ ಕಾರ್ಯಕ್ರಮಗಳನ್ನು ಇಡೀ ವರ್ಷದ ಅವಧಿಯಲ್ಲಿ ವಿವಿಧ ಸಂದರ್ಭಗಳಲ್ಲಿ ವಿಶೇಷ ಸನ್ನಿವೇಶಗಳಲ್ಲಿ ವ್ಯಾಪಕವಾಗಿ ನಡೆಸಲಾಗುತ್ತಿತ್ತು.

**ಗ್ರಾಮೀಣ ದೇವತೆಗಳು ದೇವರು:**

ಗ್ರಾಮೀಣ ಹಿಂದೂಗಳು ಹಿಂದೂ ಧರ್ಮಕ್ಕೆ ಸಂಬಂಧಿಸಿದ ದೇವರು ಮತ್ತು ದೇವತೆಗಳನ್ನು ಎಲ್ಲೆಲ್ಲಿಯೂ ಪೂಜಿಸುವುದನ್ನು ಕಾಣಬಹುದಾಗಿದೆ. ಅವುಗಳಲ್ಲಿ ಮುಖ್ಯವಾದ ದೇವರುಗಳೆಂದರೆ ಪರಮೇಶ್ವರ ಮತ್ತು ವಿಷ್ಣು. ಪರಮೇಶ್ವರನನ್ನು ಶಿವ, ಶಂಕರ, ಶಂಭುಲಿಂಗೇಶ್ವರ, ಈಶ್ವರ ಇವೇ ಮೊದಲಾದ ಹೆಸರುಗಳಲ್ಲಿ ಪೂಜಿಸುತ್ತಾರೆ. ವಿಷ್ಣುವನ್ನು ರಾಮ, ಕೃಷ್ಣ, ರಂಗ, ಶ್ರೀರಂಗ, ವಾಸುದೇವ, ವೆಂಕಟರಮಣ, ತಿರುಪತಿತಿಮ್ಮಪ್ಪ, ನಾರಾಯಣ, ಮೇಲುಕೋಟೆ ಚಲುವನಾರಾಯಣ ಇವೇ ಮೊದಲಾದ ನಾಮಗಳಿಂದ ಆರಾಧಿಸುತ್ತಾರೆ. ಗ್ರಾಮಗಳಲ್ಲಿ ನವಗ್ರಹಗಳನ್ನು ಅಗ್ನಿ, ವಾಯು, ವರುಣ ಮೊದಲಾದವುಗಳನ್ನು ಪೂಜಿಸುತ್ತಾರೆ. ಶ್ರೀರಾಮನ ಭಕ್ತನಾದ ಆಂಜನೇಯನನ್ನು ಆರಾಧಾಸುತ್ತಾರೆ. ದುರ್ಗಾ, ಕಾಳಿ, ಲಕ್ಷ್ಮೀ, ಸರಸ್ವತಿ ಮೊದಲಾದ ದೇವತೆಗಳನ್ನು ಅನನ್ಯ ಭಕ್ತಿಯಿಂದ ಪೂಜಿಸುತ್ತಾರೆ. ದುರ್ಗೆಯು ಎಂತಹ ಅಪಾಯಕಾರಕ ಆಪತ್ತುಗಳನ್ನು ಪರಿಹರಿಸುತ್ತಾಳೆ. ಕಾಳಿಯು ಬೇರೆ ಬೇರೆ ಕಾಯಿಲೆಗಳನ್ನು ಗುಣಪಡಿಸುತ್ತಾಳೆ. ಲಕ್ಷ್ಮೀಯು ಐಶ್ವರ್ಯ ದೇವತೆಯಾಗಿದ್ದು ಆಕೆಯ ಕೃಪಾಕಟಾಕ್ಷ ದೊರಕಿದರೆ ಬಡವನೂ ಬಲ್ಲಿದವನಾಗುತ್ತಾನೆ. ಮನೆಯಲ್ಲಿ ಸಂಪತ್ತಿನ ಹೊಳೆ ಹರಿಯುತ್ತದೆ. ಸರಸ್ವತಿಯು ವಿದ್ಯಾ ದೇವತೆಯಾಗಿದ್ದಾಳೆ. ಆಕೆಯ ಕೃಪಾದೃಷ್ಟಿ ಬಿದ್ದರೆ ಪಾಮರನೂ ಪಂಡಿತನಾಗುತ್ತಾನೆ. ಇವೇ ಮೊದಲಾದ ರೀತಿಯ ಗ್ರಾಮೀಣ ಜನರು ನಂಬಿಕೆಯುಳ್ಳವರಾಗಿದ್ದಾರೆ. ಶಕ್ತಿ ದೇವತೆಯ ಪ್ರತೀಕಾರದ ಮಾರಮ್ಮ, ಪಡದಲಮ್ಮ, ಕೊಲ್ಲಾಪುರಮ್ಮ, ಕಾಳಗಟ್ಟಮ್ಮ ಇವೇ ಮೊದಲಾದವುಗಳನ್ನು ಶ್ರದ್ಧಾ ಶಕ್ತಿಯಿಂದ ಆರಾಧಿಸುತ್ತಾರೆ.

ಗ್ರಾಮೀಣ ಮುಸಲ್ಮಾನರು, ಜೈನರು, ಸಿಕ್ಕರು, ಕ್ರೈಸ್ತರು ಆಯಾ ಮತಗಳಿಗೆ ಸಂಬಂಧಿಸಿದ ಅಲ್ಲಾ, ಮಹಾವೀರ, ಬುದ್ಧ, ಗುರುನಾನಕ, ಏಸುಕ್ರಿಸ್ತ ದೇವರು, ಧರ್ಮ ಸಂಸ್ಥಾಪಕರು ಮೊದಲಾದವರನ್ನು ಅನುಕ್ರಮವಾಗಿ ಪೂಜಿಸುತ್ತಾರೆ ಹಾಗೂ ಪ್ರಾರ್ಥಿಸುತ್ತಾರೆ.

**ಹಬ್ಬಗಳು:**

ಭಾರತೀಯ ಗ್ರಾಮೀಣ ಜೀವನದಲ್ಲಿ ಹಬ್ಬಗಳಿಗೆ ಅಪಾರವಾದ ಮಹತ್ವವಿದೆ. ಅವು ಮಹತ್ತರವಾದ ಪಾತ್ರ ವಹಿಸುತ್ತವೆ. ಗ್ರಾಮೀಣ ಜನರು ಹಬ್ಬದ ದಿನವನ್ನು ಪವಿತ್ರ ದಿನ ಎಂಬುದಾಗಿ ಭಾವಿಸುತ್ತಾರೆ. ಮಡಿಯಿಂದಿರಲು, ಸ್ವಚ್ಛತೆಯಿಂದಿರಲು, ಒಳ್ಳೆಯ ನಡೆಯಿಂದ ನಡೆಯಲು ಆ ದಿನ ಬಹಳವಾಗಿ ಎಚ್ಚರಿಕೆ ವಹಿಸುತ್ತಾರೆ. ಆ ದಿನ ಹಾಗೆ ನಡೆದುಕೊಂಡರೆ ಇರುವುದಾದರೆ ಇಡೀ ವರ್ಷ ಹಾಗೆಯೇ ಸಾಗುತ್ತದೆ. ಎಂಬ ಭಾವನೆಯು ಹಳ್ಳಿಗರಲ್ಲಿತ್ತು. ಇಲ್ಲವಾದರೆ ಇಡೀ ವರ್ಷ ಸಂಕಷ್ಟಗಳ ಸರಮಾಲೆಯನ್ನು ಅನುಭವಿಸಬೇಕಾಗುತ್ತದೆ ಎಂದು ಭಾವಿಸುತ್ತಾರೆ.

ಹಬ್ಬವು ಧಾರ್ಮಿಕ ದೃಷ್ಟಿಯಿಂದ ಪ್ರಾಮುಖ್ಯತೆ ಪಡೆದಿದೆ. ಅಂದು ಪೂಜೆ ಪುನಸ್ಕಾರ ಹಾಗೂ ಪ್ರಾರ್ಥನೆಗೆ ಅಪಾರವಾಗಿ ಅವಕಾಶವಿರುತ್ತದೆ. ವಿವಿಧ ದೇವರು ಹಾಗೂ ದೇವತೆಗಳನ್ನು ಪೂಜಿಸಲಾಗುತ್ತದೆ. ಜನರು ಸ್ನಾನ ಮಾಡಿ ಮಡಿ ಬಟ್ಟೆಯನ್ನುಟ್ಟು ಇಲ್ಲವೇ ಹೊಸ ಹೊಸ ಬಟ್ಟೆಗಳನ್ನುಟ್ಟು ಶುಚಿಯಾಗಿರುತ್ತಾರೆ. ಅವರು ಹಬ್ಬದ ದಿನ ಕೆಟ್ಟ ಆಲೋಚನೆ, ದುಷ್ಟ ವರ್ತನೆಗಳನ್ನು ತಂದು ಕೊಳ್ಳುವುದಿಲ್ಲ. ಅಂದು ಧಾರ್ಮಿಕ ಸಭೆ ಸಮಾರಂಭಗಳನ್ನು ಏರ್ಪಡಿಸುತ್ತಾರೆ. ಹರಿಕಥೆ, ಶಿವಕಥೆ, ಸಂಗೀತ ಕಚೇರಿ ಮೊದಲಾದ ಉಪಯುಕ್ತ ಉತ್ತಮ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ. ಎಲ್ಲೆಲ್ಲಿಯೂ ಆಧ್ಯಾತ್ಮಿಕ ವಾತಾವರಣ, ಆಧ್ಯಾತ್ಮಿಕ ಚಿಂತನೆ ಕಂಡುಬರುತ್ತವೆ. ಜನರು ವ್ಯವಹಾರಗಳಂತೆ ಪರಮಾರ್ಥಿಕ ಚಿಂತನೆಯಲ್ಲಿ ಹೆಚ್ಚು ಹೆಚ್ಚಾಗಿ ತೊಡಗುತ್ತಾರೆ. ದೇವ ಮಂದಿರಗಳಿಗೆ ಭಕ್ತಿ ಭಾವದಿಂದ ಭೇಟಿ ಕೊಡುತ್ತಾರೆ. ಸದ್ಭಾವನೆಗಳಿಂದ ನಡೆದುಕೊಳ್ಳುತ್ತಾರೆ.

ಗ್ರಾಮೀಣ ಜೀವನದಲ್ಲಿ ಹಬ್ಬಗಳು ಸಾಮಾಜಿಕ ದೃಷ್ಟಿಯಿಂದಲೂ ಹೆಚ್ಚಿನ ಪ್ರಾಮುಖ್ಯತೆ ಪಡೆದಿವೆ. ಹಬ್ಬದ ದಿನ ವಿವಿಧ ಜಾತಿಗಳ ಜನ ಪರಸ್ಪರ ಬೆರೆಯುತ್ತಾರೆ. ಅದು ಅವರ ನಡುವೆ ಇರಬಹುದಾದ ಬಿಗುವನ್ನು ಕಡಿಮೆ ಮಾಡಿಕೊಳ್ಳಲು ನೆರವಾಗುತ್ತದೆ. ಜನರು ಒಬ್ಬರ ಮನೆಗೆ ಮತ್ತೊಬ್ಬರು ಭೇಟಿಕೊಟ್ಟು ಶುಭಾಶಯಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಇದನ್ನು ಹಿಂದೂಗಳು ಆಚರಿಸುವಂತಹ ಚಂದ್ರಮಾನ ಯುಗಾದಿ ಹಬ್ಬದಲ್ಲಿ ಹಿರಿಯರ ಹಬ್ಬ ಎಂದು ಮಾಡಿ ಶುಭಾಶಯಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಅದು ಅವರ ಸಂಘಟನೆಯನ್ನು ಬಲಪಡಿಸುತ್ತದೆ. ಅನೇಕ ಹಬ್ಬಗಳಲ್ಲಿ ಜನ ವೈಯಕ್ತಿಕ ಕಷ್ಟಕಾರ್ಪಣ್ಯಗಳನ್ನು, ದ್ವೇಷಗಳನ್ನು ಮರೆತು ಆನಂದವಾಗಿ ಕಾಲಕಳೆಯುತ್ತಾರೆ. ಸುಖ ಸಂತೋಷದಿಂದ ಇತರರೊಡನೆ ಕೂಡಿ ವ್ಯವಹರಿಸುತ್ತಾರೆ. ಪ್ರೀತಿ, ಸಹಕಾರ, ಕೂಡಿ ಬಾಳುವ ಬಗ್ಗೆ ತುಂಬು

ಮನಸ್ಸಿನಿಂದ ನಡೆದುಕೊಳ್ಳುತ್ತಾರೆ. ಇಡೀ ದಿನ ಸಂತೋಷದಾಯಕ ವಾತಾವರಣದಿಂದ ತುಂಬಿತುಳಕಾಡುತ್ತಿರುವಂತೆ ಭಾಸವಾಗುತ್ತದೆ.

**ಹಬ್ಬಗಳ ಪೂರ್ವ ತಯಾರಿ:**

ಭಾರತೀಯ ಗ್ರಾಮ ಸಮಾಜದಲ್ಲಿ ಹಬ್ಬಗಳ ಪಾತ್ರ ತುಂಬಾ ಪ್ರಮುಖವಾದದ್ದು. ಹಬ್ಬಗಳು ಹಳ್ಳಿಗರ ಮಾನಸಿಕ ಯಾತನೆಗಳನ್ನು, ಕಷ್ಟಗಳನ್ನು, ಸಂಕಟಗಳನ್ನು ದೂರ ಮಾಡುತ್ತದೆ. ಎಂದು ಹೇಳಲಾಗದಿದ್ದರೂ ಸಹ ಸ್ವಲ್ಪ ಮಟ್ಟಿಗಾದರೂ ಖುಷಿಯನ್ನು ತಂದುಕೊಡುತ್ತದೆ. ಹಬ್ಬಗಳು ಒಂದು ವಾರವಿದೆ ಅಥವಾ ಒಂದು ತಿಂಗಳಿದೆ ಎನ್ನುವ ಮೊದಲೇ ದೂರದ ಊರಿನಲ್ಲಿರುವವರನ್ನು ಹಬ್ಬಕ್ಕೆ ಬರಹೇಳುತ್ತಿದ್ದರು. ಹಬ್ಬಕ್ಕೆ ಬೇಕಾದ ಸೌದೆಯನ್ನು ತಂದು ಹಾಕಿಕೊಳ್ಳುತ್ತಿದ್ದರು. ಮನೆಗಳನ್ನು ಚೆನ್ನಾಗಿ ಧೂಳು ಕೊಡವಿ ಅದಕ್ಕೆ ಸುಣ್ಣ, ಬಣ್ಣಗಳನ್ನು ಬಳಿಯುತ್ತಿದ್ದರು. ಊಟಕ್ಕೆ ಸಂಬಂಧಿಸಿದ ಹಪ್ಪಳ, ಸಂಡಿಗೆ, ಚಕಲಿ, ಉಪ್ಪಿನಕಾಯಿ, ಧನ್ಯ ಕಾಳುಗಳನ್ನು ತಯಾರು ಮಾಡಿಕೊಳ್ಳುತ್ತಿದ್ದರು. ಹಾಗೆಯೇ ಕುಟುಂಬದ ಪ್ರತಿಯೊಬ್ಬ ಸದಸ್ಯರಿಗೆ ಹೊಸ ಬಟ್ಟೆಗಳನ್ನು ತರುತ್ತಿದ್ದರು. ಹಬ್ಬಗಳ ವಿಶೇಷ ದಿನವನ್ನು ಕಂಡು ಕೊಂಡು ಹೊಸಮನೆಗೆ ಇಳಿದುಕೊಳ್ಳುವುದು ವಾಡಿಕೆಯಾಗಿತ್ತು. ಹಬ್ಬದ ದಿನಗಳು ಹತ್ತಿರವಾಗುತ್ತಿದ್ದಂತೆಯೇ ಮನೆಗಳಲ್ಲಿ, ಹಳ್ಳಿಗಳಲ್ಲಿ ಸಡಗರವೋ ಸಡಗರ. ಮನೆಯ ಯಜಮಾನರು ಹಬ್ಬದ ತಯಾರಿಯಲ್ಲಿ ಚಟುವಟಿಕೆಯಿಂದ ಕೆಲಸ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಸ್ವಲ್ಪ ಉಳ್ಳವರಾಗಿದ್ದರೆ ಅವರು ಹಬ್ಬಕ್ಕೆ ಶುಭ ದಿನದಂದು ತನ್ನ ಕೂಲಿ ಕಾರ್ಮಿಕರನ್ನು ಕರೆಯಿಸಿ ಅವರಿಗೆ ಬಟ್ಟೆಗಳನ್ನು, ಹಣವನ್ನು ನೀಡುವುದು, ಹೊಸ ಹೊಸ ವಾಹನಗಳನ್ನು ಖರೀದಿಸುವುದರ ಸಂಭ್ರಮದಲ್ಲಿರುತ್ತಾರೆ. ಹೀಗೆ ಕೂಡಿ ಹಬ್ಬಗಳನ್ನು ಮಾಡುವುದರಿಂದ ಗ್ರಾಮದ ಜನತೆಯಲ್ಲಿ ಸಹಬಾಳ್ವೆ ಉಂಟಾಗುತ್ತದೆ. ಸುಖ ಸಂತೋಷದಿಂದ ವ್ಯವಹರಿಸುವುದು, ಸಣ್ಣ ಪುಟ್ಟ ವೈ ಮನಸ್ಸುಗಳನ್ನು ಮರೆತು ಹೊಸತನದಿಂದ ವರ್ತಿಸುತ್ತಾರೆ. ತಪ್ಪ ತಿಳುವಳಿಕೆಗಳನ್ನು ದೂರ ಮಾಡಿ ಪ್ರೀತಿ ವಿಶ್ವಾಸದಿಂದ, ಸಹಾಯ ಸಹಕಾರದಿಂದ ಕೂಡಿ ಬಾಳುವ ಬಗ್ಗೆ ತುಂಬು ಮನಸ್ಸಿನಿಂದ ನಡೆದುಕೊಳ್ಳುವುದರ ಮುಖಾಂತರ ಸಡಗರ ಸಂಭ್ರಮದಿಂದ ಹಬ್ಬವನ್ನು ನಡೆಸುತ್ತಿದ್ದರು.

ಹಳ್ಳಿಗಳಲ್ಲಿ ಸರ್ವೇ ಸಾಮಾನ್ಯವಾಗಿ ಆಚರಿಸುವಂತ ಹಬ್ಬಗಳೆಂದರೆ ಸಂಕ್ರಾಂತಿ, ಮಹಾಶಿವರಾತ್ರಿ, ಹೋಳಿಹಬ್ಬ, ಯುಗಾದಿ, ರಕ್ಷಾಬಂಧನ, ನಾಗರ ಪಂಚಮಿ, ಗಣೇಶ ಚತುರ್ಥಿ, ವಿಜಯದಶಮಿ, ದೀಪಾವಳಿ, ಈದ್‌ಮಿಲಾದ್, ಕ್ರಿಸ್‌ಮಸ್, ಬಕ್ರಿದ್, ಮೋಹರಂ, ದಸರಾ ಇನ್ನೂ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ಇತ್ತೀಚಿನ ಹಬ್ಬಗಳು ಕೇವಲ ಯಾಂತ್ರಿಕ ಹಬ್ಬಗಳಾಗಿವೆ. ಏಕೆಂದರೆ ದಿನನಿತ್ಯ ನಡೆಯುವಂತಹ ಒಂದೊಂದು ಸನ್ನಿವೇಶಗಳು ಸಹ ಹಬ್ಬಗಳಾಗಿರುತ್ತವೆ. ಇದಕ್ಕೆ ಕಾರಣ ಜಾಗತೀಕರಣ. ಬೆಳೆಯುತ್ತಿರುವ ಆಧುನೀಕರಣ, ಜಾಗತೀಕರಣ, ತಾಂತ್ರಿಕತೆಯಿಂದ ಹಬ್ಬಗಳ ಸ್ವರೂಪ ಬದಲಾಗಿದೆ. ಇತ್ತೀಚಿಗೆ ಆಚರಿಸುವಂತಹ

ಹಬ್ಬಗಳಿಂದ ಯಾವುದೇ ರೀತಿಯ ನೆಮ್ಮದಿ ಸಿಗುತ್ತಿಲ್ಲ. ಕಷ್ಟಗಳ ನಿವಾರಣೆಯಾಗುತ್ತಿಲ್ಲ. ಹಬ್ಬಗಳು ಒಂದು ಕಾಲದಲ್ಲಿ ಅಗಲಿರುವವರನ್ನು ಒಂದು ಮಾಡುವಂತಹ ಪ್ರವೃತ್ತಿಯನ್ನು ಹೊಂದಿತ್ತು. ಆದರೆ ಇದು ವಿರೋಧಿಗಳು–ವಿರೋಧಿಗಳಾಗಿಯೇ ಉಳಿದಿದ್ದು ಸಮಯ ಸಿಕ್ಕಾಗ ಹೊಡೆದಾಡುವ ಕ್ರೂರ ತನಕ್ಕೆ ಇಳಿದಿದೆ. ಒಟ್ಟಾರೆಯಾಗಿ ಇತ್ತೀಚಿನ ದಿನಗಳಲ್ಲಿ ಹಬ್ಬಗಳು ತನ್ನ ಸ್ವರೂಪಗಳನ್ನು ಬದಲಾಯಿಸಿ ಕೊಳ್ಳುತ್ತವೆ. ಹಬ್ಬಗಳು ಶಾಸ್ತ್ರ ಪೂರ್ತಿಗಾಗಿ ಮಾಡುತ್ತಾರೆ. ಇತ್ತೀಚಿನ ಮಕ್ಕಳಿಗೆ ಹಬ್ಬಗಳ ಸವಿಯೇ ತಿಳಿಯದಾಗಿದೆ. ಹೀಗೆ ಹಬ್ಬಗಳು ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಾ ಹೋದಂತೆ ತನ್ನ ಪ್ರಾಮುಖ್ಯತೆಯನ್ನು ಸಹ ಕಳೆದುಕೊಂಡು ಕೊನೆಗೊಂದು ದಿನ ಹಬ್ಬಗಳು ಕಣ್ಮರೆಯಾಗುವ ಸಾಧ್ಯತೆಗಳು ಕಂಡುಬರುತ್ತವೆ.

**ಜಾತ್ರೆಗಳು:**

ಒಕ್ಕಲು ಪ್ರಧಾನವಾದ ಬಹುಮುಖ ಸಂಸ್ಕೃತಿಯನ್ನು ಹೊಂದಿದ ಭಾರತ ದೇಶದಲ್ಲಿ ಜನರು ತಮ್ಮ ಬಿಡುವಿನ ಸಂದರ್ಭದಲ್ಲಿ ಗುಂಪುಗಳಾಗಿ ಸೇರಿ ತಮ್ಮ ಕಷ್ಟ–ಸುಖಗಳನ್ನು ಹಂಚಿಕೊಳ್ಳುವುದು, ಇನ್ನೂ ಹಲವಾರು ಕೆಲಸ ಕಾರ್ಯಗಳ ಬದಲಾವಣೆ ಮಾಡಿಕೊಳ್ಳುವುದು ಕಾಣುತ್ತೇವೆ. ಈ ಎಲ್ಲಾ ಕೆಲಸಗಳಿಗೆ ಜಾನಪದರು ಒಂದು ನಿದಿಷ್ಟವಾದ ಸ್ಥಳ ರೂಪಿಸಿಕೊಂಡು, ಅವುಗಳನ್ನು ದೇವರ ಸ್ಥಳವೆಂದು ಕರೆದರು. ಭಾರತ ದೇಶವು ವಿಶಾಲವಾದುದರಿಂದ ಹಲವಾರು ಬುಡಕಟ್ಟುಗಳ ಹೊಂದಿದರ ಪ್ರಯುಕ್ತ ಪ್ರತಿಯೊಂದು ಗ್ರಾಮದಲ್ಲೂ ಒಂದಿಲ್ಲೊಂದು ದೇವರ ಗುಡಿ–ಗುಂಡಾರ ಊರ ಹೊರಗೆ ಆಗಲಿ, ಊರ ಮಧ್ಯದಲ್ಲಿಯಾಗಲೀ ಇರುವದು ಕಂಡುಬರುತ್ತದೆ. ಈ ದೇವರುಗಳ ಆರಾಧನೆ, ಆಚರಣೆ, ಜಾತ್ರೆ, ಉತ್ಸವಗಳು ಒಂದು ನಿದಿಷ್ಟ ಕಾಲದಲ್ಲಿ ನಿಯಮಿತವಾಗಿ ಊರ ಜನರು ಸೇರಿ ನೆರವೇರಿಸುವ ಆಚರಣೆಗೆ 'ಜಾತ್ರೆ' ಎನ್ನುತ್ತಾರೆ.

"ಜಾತ್ರೆ" ಎಂಬ ಪದ "ಯಾತ್ರೆ"ಯ ಉದ್ಭವ. ಯಾತ್ರಾ ಸ್ಥಾನಗಳೆಲ್ಲ ಜಾತ್ರೆಯ ಸ್ಥಳಗಳಾಗಲಿಕ್ಕಿಲ್ಲ. ಆದರೆ ಜಾತ್ರೆಯ ಸ್ಥಳಗಳೆಲ್ಲ ಸಾಮಾನ್ಯವಾಗಿ ಯಾತ್ರಾ ಸ್ಥಾನವಾಗಿರುತ್ತವೆ. ಇದಕ್ಕೆ ಸಮಂಜಸವಾಗಿ ಸಂಸ್ಕೃತದ ಒಂದು ಉಕ್ತಿಯು ಹೀಗಿದೆ. "ಯಾನೇನ ಯ್ರಾಯತ್ ಇತಿ ಯಾತ್ರಾ" ಇದರ ಅರ್ಥ ಪುಣ್ಯ ಕ್ಷೇತ್ರ ದರ್ಶನಕ್ಕೆ ಹೋಗುವವರ ರಕ್ಷೆಯ ಯಾತ್ರೆಯಾಗಿದೆ. ಯಾತ್ರೆ ಅಂದರೆ ಯಾವುದೇ ಕಾರ್ಯದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ಪುಣ್ಯಕ್ಷೇತ್ರಗಳ ದರ್ಶನ ಪಡೆಯುವುದಾಗಿದೆ. ಇದಕ್ಕೆ ನಿದರ್ಶನವಾಗಿ ನಮ್ಮ ಪೂರ್ವಜರು ವರ್ಷದಲ್ಲಿ ಒಂದು ನಿರ್ದಿಷ್ಟ ಸಮಯದಲ್ಲಿ ತಾವು ಬೇಡಿಕೊಂಡ ಹರಕೆಗಳನ್ನು ಸಲ್ಲಿಸಲು ಇಂತಹ ಸ್ಥಳಗಳಿಗೆ ಹೋಗುತ್ತಿದ್ದರು. ಈ ಸ್ಥಳದಲ್ಲಿ ನೆರೆಯುವ ಜನಸಮೂದಾಯಕ್ಕೆ 'ಜಾತ್ರೆ' ಎಂದು ಕರೆಯುತ್ತಾರೆ. ಹಿಂದೆ ಇಂದು ಇರುವಂತಹ ವಾಹನ ಸೌಕರ್ಯಗಳು ಇರಲಿಲ್ಲ. ಇಂತಹ ಸಮಯದಲ್ಲಿ ಜನರು ಗುಂಪು ಗುಂಪಾಗಿ ಕಾಲು ನಡುಗೆಯಿಂದ ಗಾಡಿ ಕಟ್ಟಿಕೊಂಡು ಜಾತ್ರೆಗಳಿಗೆ ಹೋಗುತ್ತಿದ್ದರು. ಇಂತಹ ಸನ್ನಿವೇಶ ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಹಲವಾರು ಜಾತ್ರಗಳು ಪ್ರಾರಂಭವಾದರೆ ಜನರು ದೇವರ ಭಯ–ಭಕ್ತಿಯಿಂದ

ಭಜನಾ ಮಂಡಳಿಯೊಂದಿಗೆ ಪಾದ ಯಾತ್ರೆ ಮಾಡುವುದು ಶ್ರೇಯಸ್ಸು ಎಂದು ಭಾವಿಸಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಪಂಡರಪುರ ಜಾತ್ರೆ, ಶ್ರೀಶೈಲ ಮಲ್ಲಿಕಾರ್ಜುನ ಜಾತ್ರೆ, ತಿಪ್ಪೇಸ್ವಾಮಿ ಜಾತ್ರೆ, ರೇಣುಕಾ ಎಲ್ಲಮ್ಮ ಜಾತ್ರೆ, ಶ್ರೀ ಗುರು ಕೊಟ್ಟುರೇಶ್ವರ ಜಾತ್ರೆ ಈ ಜಾತ್ರೆಗಳಿಗೆ ಜನರು ಸಹಸ್ರಾರು ಸಂಖ್ಯೆಯಲ್ಲಿ ಪಾದಯಾತ್ರೆ ಗೈದರೆ ಹಳ್ಳಿಗಳಲ್ಲಿ ಜರಗುವಂತಹ ಜಾತ್ರೆಗಳಿಗೆ ನೆರೆ–ಹೊರೆ ಹಳ್ಳಿಗಳಿಂದ ಜನರು ತಮ್ಮ ಹರಕೆಯ 'ಕುರುಹು' ಎಂದು ಭಾವಿಸಿ ಇನ್ನೂ ನಡೆದುಕೊಂಡು ಹೋಗುವ ಪದ್ಧತಿ ಹಲವಾರು ಜಾತ್ರೆಗಳಲ್ಲಿ ಕಂಡು ಬರುತ್ತವೆ.

'ಜನ ಸೇರಿದರೆ ಜಾತ್ರೆ' ಗುಂಪು ಸಮೂಹ ಜನರಾಶಿಯೇ ಜಾತ್ರೆ, ಒಟ್ಟಿನಲ್ಲಿ ಬೃಹತ್ ಪ್ರಮಾಣದ ಸಂಖ್ಯೆಯಲ್ಲಿ ಜನ ಕೂಡುವುದು ಅದಕ್ಕೆ ಜಾತ್ರೆ ಎನ್ನುತ್ತಾರೆ. ಈ ಸಂದರ್ಭದಲ್ಲಿ ಸೇರಿದ ಸಮೂಹ ರಥದ ಸುತ್ತಲೂ ಪ್ರದಕ್ಷಿಣೆ ಮಾಡುವುದು, ಅಂಗಡಿಗಳ ಹಾಗೂ ಮನರಂಜನೆ ಆಟದ ಅಂಗಡಿಗಳ ಸುತ್ತ ಜನ ಅಲೆಯುವುದು ನೋಡಿದರೆ 'ಜಾತ್ರೆಗೆ ಜನ ಬಂಡವಾಳ' ಎನ್ನುವ ಮಾತು ಸೂಕ್ತವೆನಿಸಬಹುದು "ಜನ ಮರಳೋ ಜಾತ್ರೆ ಮರುಳೋ" ಇವುಗಳನ್ನು ಗಮನಿಸಿದಾಗ ಇಲ್ಲಿ ನೆರೆಯುವಂತಹ ಸಮೂಹ ತಂಟೆ–ತಕರಾರಕ್ಕಾಗಿಯೂ ಅಲ್ಲ ಅಥವಾ ಬೇರೆ ಉದ್ದೇಶಕ್ಕಾಗಿಯೂ ಅಲ್ಲ. ಒಂದು ಪುಣ್ಯ ಕ್ಷೇತ್ರದ ದರ್ಶನಕ್ಕೆ ಕೂಡಿದೆ ಎಂದು ಸೂಚಿಸುತ್ತದೆ. ಜಾತ್ರೆ ಎಂಬುದು ಮೋಜು, ಉಲ್ಲಾಸ, ಮನರಂಜನೆಯ ಚಟುವಟಿಕೆಯ ಒಂದು ಅಂಗವಾದರೆ ಅದು ಸಾಮರಸ್ಯ ಕಾಪಾಡಿಕೊಂಡು ಎಲ್ಲ ಧರ್ಮೀಯರಲ್ಲಿ ಪ್ರೀತಿ–ಪ್ರೇಮದ ಸಂಕೋಲೆಯ ಭದ್ರ ಬಿನಾದಿ ರೂಪಿಸುವಲ್ಲಿ ಗ್ರಾಮೀಣ ಕಲೆಗಳನ್ನು ಪ್ರೋತ್ಸಾಹಿಸುವುದರಲ್ಲಿಯೇ ಸ್ತ್ರೀ ಪುರುಷರಲ್ಲಿ ಸರ್ವತೋಮುಖವಾಗಿ ಸಂತೋಷ ಪಡಿಸುವುದಕ್ಕೆ ಇದು ಪೂರಕವಾಗಿದೆ.

**ಸಂಸ್ಕಾರಗಳು:**

ಸಂಸ್ಕಾರ ಎಂದರೆ ಪರಿಶುದ್ಧಗೊಳ್ಳುವುದು ಎಂದರ್ಥ. ಮನುವಿನ ಪ್ರಕಾರ ಸಂಸ್ಕಾರಗಳು ದೇಹವನ್ನು ಪರಿಶುದ್ಧಗೊಳಿಸುವುವು. ಪ್ರತಿಯೊಂದು ಸಂಸ್ಕಾರವು ಹೋಮ ಇಲ್ಲವೆ ಯಜ್ಞದಿಂದ ಆರಂಭವಾಗುತ್ತದೆ. ಸಂಸ್ಕಾರ ಎಂಬ ಪದವು ಸ್ವಂತ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವುದನ್ನು ಧಾರ್ಮಿಕ ಕಾರ್ಯ ಇಲ್ಲವೇ ಕ್ರಿಯಾ ವಿಧಿಯನ್ನು ಆಚರಿಸುವುದನ್ನು ಸೂಚಿಸುತ್ತದೆ. ವಿವಿಧ ಬಗೆಯ ಅಭಿಪ್ರಾಯಗಳನ್ನು ಸಂಸ್ಕಾರವು ತುಂಬಾ ವಿಶಾಲ ಅರ್ಥವುಳ್ಳದಾಗಿರುವುದು. ಹಿಂದೂ ಧರ್ಮದಲ್ಲಿ ಅನೇಕ ಸಂಸ್ಕಾರಗಳು ಆಚರಣೆಯಲ್ಲಿವೆ.

ಗೌತಮ ಧರ್ಮ ಸೂತ್ರದ ಪ್ರಕಾರ ೪೮ ಸಂಸ್ಕಾರಗಳಿವೆ. ಸ್ಮೃತಿ ಚಂದ್ರಿಕಾದ ಪ್ರಕಾರ ೧೬ ಸಂಸ್ಕಾಗಳಿವೆ, ಗೃಂದ್ಯ ಸೂತ್ರದ ಪ್ರಕಾರ ೧೦ ಸಂಸ್ಕಾರಗಳಿವೆ ಅವುಗಳಲ್ಲಿ ೧೬ ಪ್ರಮುಖವಾದವುಗಳು ಅವುಗಳಲ್ಲಿ ಕೆಲವನ್ನು ವಿವರಿಸಲಾಗಿದೆ.

**ಗರ್ಭದಾನ:**

ಮಾನವ ಜೀವಿಯ ಪ್ರಪ್ರಥಮ ಸಂಸ್ಕಾರವೇ ಗರ್ಭದಾನ. ಈ ಸಂಸ್ಕಾರದಂತೆ ನವ ವಿವಾಹಿತ ಪುರುಷನು ವಿವಾಹದ ನಂತರ ಒಂದು ಶುಭ ಮುಹೂರ್ತದಲ್ಲಿ ದೇವರ

ಹೆಸರಿನಲ್ಲಿ ಅಗ್ನಿ ಸಾಕ್ಷಿಯಾಗಿ ತನ್ನ ಧರ್ಮ ಪತ್ನಿಗೆ ಗರ್ಭದಾನ ಮಾಡುವುದಾಗಿ ಸಂಕಲ್ಪ ಮಾಡುವುನು. ಪತ್ನಿಯು ಗರ್ಭಿಣಿಯಾಗುವಂತೆ ಹರಸಲು ಅನನ್ಯ ಭಕ್ತಿಯಿಂದ ದೇವರು–ದೇವತೆಯನ್ನು ಪ್ರಾರ್ಥಿಸುತ್ತಾನೆ. ಅಂದಿನ ರಾತ್ರಿ ಭೋಜನಕ್ಕೆ ಊರಿನ ಹಿರಿಯ ಅಥವಾ ಪತಿ–ಪತ್ನಿಯರ ಹಿರಿಯರ ವ್ಯಕ್ತಿಗಳನ್ನು ಬರಹೇಳಿ ಅವರಿಗೆ ಸಿಹಿ ಊಟ ಹಾಕಿಸಿ ಅವರಿಂದ ಹಾರೈಕೆ ತೆಗೆದುಕೊಂಡು ನಂತರ ಪತಿ–ಪತ್ನಿಯರು ಕೂಡುವಿಕೆಗೆ ತೆರಳುತ್ತಾರೆ.

ಮತ್ತೊಂದು ವಿಧಾನದಲ್ಲಿ ಹೆಣ್ಣು–ಗಂಡಿನವರ ಮನೆಗಳಲ್ಲಿ ಕಾರ್ಯವನ್ನು ನೆರವೇರಿಸುತ್ತಾರೆ. ಅಂದರೆ ವಿವಾಹವಾಗಿ ತಿರುಗಿನ ದಿನ ಅಥವಾ ನಾಲ್ಕದು ದಿನಗಳ ನಂತರದಲ್ಲಿ ಪತ್ನಿಯರ ಮನೆಯಲ್ಲಿ ಈ ಕಾರ್ಯ ಮಾಡುತ್ತಾರೆ. ಈ ಸಂದರ್ಭದಲ್ಲಿ ವಿವಾಹಕ್ಕೆ ಬರದೇ ಇರುವವರಿಗೆ ಭೋಜನ ಹಾಕಿಸಿ ಬಟ್ಟೆ ಕೊಟ್ಟು ಅವರಿಂದ ಆಶಿರ್ವಾದ ಪಡೆಯುತ್ತಾರೆ. ಇದೇ ರೀತಿಯಲ್ಲಿಯು ಸಹ ಪತಿಯ ವಾಸಸ್ಥಾನದಲ್ಲಿ ಮಾಡುತ್ತಾರೆ.

**ಸೀಮಂತೋನ್ನಯನ:**

ಸೀಮಂತೋನ್ನಯನ ಗರ್ಭಿಣಿಗೆ ಮಾನಸಿಕ ಸ್ಥೈರ್ಯವನ್ನು ತಂದುಕೊಡಲು ಮಾಡುವ ಸಂಸ್ಕಾರವಾಗಿರುವುದು. ಈ ಸಂಸ್ಕಾರವನ್ನು ಪತ್ನಿಯು ಗರ್ಭಿಣಿಯಾಗಿರುವಾಗ ಏಳನೇ ತಿಂಗಳಲ್ಲಿ ಆಚರಿಸಲಾಗುವುದು. ಈ ಕಾರ್ಯಕ್ಕೆ ಕೇವಲ ಹೆಣ್ಣು ಮಕ್ಕಳನ್ನು ಮಾತ್ರ ಆಹ್ವಾನ ಮಾಡಲಾಗುತ್ತದೆ. ಆಹ್ವಾನಿತರು ಗರ್ಭಿಣಿಯಾದವಳಿಗೆ ಉಡುಗೋರೆಯನ್ನು ಕೊಟ್ಟು ಒಳ್ಳೆಯ ಮಗುವನ್ನು ಈ ಲೋಕಕ್ಕೆ ಕೊಡು ಎಂದು ಆಶಿರ್ವಾದಿಸುತ್ತಾರೆ. ಈ ಸಂದರ್ಭದಲ್ಲಿ ಗರ್ಭಿಣಿಯ ಆಸೆ ಆಕಾಂಕ್ಷೆಗಳನ್ನು, ಬಯಕೆಗಳನ್ನು ಪೂರೈಸುತ್ತಾರೆ. ಇದನ್ನು ಹೆಚ್ಚಿನ ರೀತಿಯಲ್ಲಿ ಸೋದರಮಾವಂದಿರು ಅವರ ಬಯಕೆಗಳನ್ನು ಪೂರೈಸುತ್ತಾರೆ.

**ನಾಮಕರಣ:**

ಮಗುವು ಜನಿಸಿದ ಹತ್ತು ಇಲ್ಲವೇ ಹನ್ನೆರಡನೆಯ ದಿನ ಶುಭ ಮುಹೂರ್ತದಲ್ಲಿ ನಾಮಕರಣ ಸಂಸ್ಕಾರವನ್ನು ಆಚರಿಸಲಾಗುವುದು. ಇದಕ್ಕಿಂತ ಹಿಂದೆಯೆ ಮಗು ಹುಟ್ಟಿದ ದಿನವೆ ಹೋಗಿ ಶಾಸ್ತ್ರ ಕೇಳಿಸಿಕೊಂಡು ಬಂದು ಮಗುವಿಗೆ ಯಾವ ಅಕ್ಷರದಲ್ಲಿ ಹೆಸರನ್ನಿಡಬೇಕು ಎಂದು ತಿಳಿದು ಕಾರ್ಯ ಪ್ರವೃತ್ತರಾಗುತ್ತಾರೆ. ನಂತರ ಶುಭಮುಹೂರ್ತದಂದು ದೇವತೆ, ಮಾಸದೇವತೆ, ನಕ್ಷತ್ರದೇವತೆಗಳನ್ನು ಪ್ರಾರ್ಥಿಸಿ ಶಿಶುವಿಗೆ ಸಕಲ ದೇವತೆಗಳು ಅನುಗ್ರಹಿಸಿ ಆಯಸ್ಸು ಆರೋಗ್ಯ ವೃಧ್ಧಿಯಾಗುವಂತೆ ದೇವ ಬ್ರಾಹ್ಮಣ ಅನುಗ್ರಹಿಸಬೇಕೆಂದು ಕ್ರಿಯಾ ವಿಧಿಗಳನ್ನು ಮಾಡಲಾಗುತ್ತದೆ. ಈ ಸಂದರ್ಭದಲ್ಲಿ ಮನೆಗೆ ಬರುವಂತಹ ಅತಿಥಿಗಳು ಮಗುವಿಗೆ ಬಟ್ಟೆ, ಗೆಜ್ಜೆಉಡದಾರ, ಕಾಲುಗಡಗ, ಮುರ ಮುಂತಾದ ಬೆಳ್ಳಿ, ಬಂಗಾರದ ವಡವೆಗಳನ್ನು ತಂದು ಮುಯಿ ಮಾಡುತ್ತಾರೆ. ಈ ಕಾರ್ಯವನ್ನು ಜನಪದರು ತೊಟ್ಟಿಲ ಕಾರ್ಯವೆಂತಲೂ ಕರೆಯುತ್ತಾರೆ. ಈ ವ್ಯವಸ್ಥೆಯು ಜಾಗತೀಕರಣದ ಪ್ರಭಾವದಿಂದ, ಆಧುನೀಕರಣದ ಪ್ರಭಾವದಿಂದ ಬೇರೆ ಬೇರೆ ಸ್ವರೂಪವನ್ನು ಪಡೆದುಕೊಳ್ಳುತ್ತಿದೆ.

**ಶವ ಸಂಸ್ಕಾರ:**

ಜೀವನದ ಮೊದಲ ಬಾರಿಗೆ ನಮಗೆ ಗೊತ್ತಾಗದೇ ಹಾಗೆ ಎರಡು ಬಾರಿ ಸಂಸ್ಕಾರಕ್ಕೆ ಒಳಗಾಗುತ್ತೇವೆ. ಮೊದಲು ಮಗುವಾಗಿದ್ದಾಗ ನಾಮಕರಣ ಮಾಡುವುದು. ಎರಡನೇ ಬಾರಿಗೆ ನಮ್ಮ ಜೀವ ಪಕ್ಷಿ ಹಾರಿ ಹೋದಾಗ. ಗ್ರಾಮೀಣ ಸಂಪ್ರದಾಯದಲ್ಲಿ ಇಹಲೋಕ ತ್ಯಜಿಸಿದಂತವರನ್ನು ಸಂಸ್ಕಾರವನ್ನು ಮಾಡುವುದರ ಬಗೆಗಳು ವಿಭಿನ್ನತೆಯಿಂದ ಕೂಡಿವೆ. ಹಿಂದೂ ಸಂಪ್ರದಾಯ ಪ್ರಕಾರ ಕೆಲವರನ್ನು ಊಳುತ್ತಾರೆ. ಕೆಲವರನ್ನು ಸುಡುತ್ತಾರೆ. ಕೆಲಕಡೆ ಕೆಲವರನ್ನು ಮಾತ್ರ ಕುರಿಸಿ ಪ್ರಾಣಿಪಕ್ಷಿಗಳು ತಿನ್ನಲಿಕ್ಕೆ ಬಿಟ್ಟುಬಿಡುತ್ತಾರೆ. ಹಿಂದೂಗಳಲ್ಲಿ ಒಬ್ಬ ಮನುಷ್ಯನು ಎರಡು ಬಾರಿ ವಿವಾಹವಾಗುತ್ತಾನೆ. ಅಂದರೆ ತನ್ನ ಜೀವನದ ಸಂಗಾತಿಯನ್ನು ಪಡೆದುಕೊಳ್ಳುವಾಗ ಒಂದು ಬಾರಿ, ಮತ್ತೆ ಆಕೆಯನ್ನು ಅಗಲುವಾಗ ಮತ್ತೊಂದು ಸಾರಿ. ಸತ್ತಂತಹ ಶವಕ್ಕೆ ವಿವಾಹದ ಸಂದರ್ಭದಲ್ಲಿ ಯಾವ ರೀತಿಯಾದ ಶೃಂಗಾರ, ಅಲಂಕಾರ ಮಾಡುತ್ತಿರುತ್ತಾರೆಯೋ ಅದೇ ರೀತಿಯಲ್ಲಿ ಹೆಣ್ಣು-ಗಂಡು ಇಬ್ಬರಿಗೂ ಮಾಡುತ್ತಾರೆ. ಹೆಣ್ಣು ಮಕ್ಕಳು ಸತ್ತರೆ ಆಕೆಯನ್ನು ಸ್ನಾನಮಾಡಿಸಿ ಉಡಿಯಕ್ಕಿ ತುಂಬಿ ಹೊಸಬಟ್ಟೆಯನ್ನು ತೊಡಸಿ ಹೊಸ ಸೀರೆ, ಕುಬುಸ ತೊಡಸಿ ಅಲಂಕಾರ ಮಾಡುತ್ತಾರೆ. ಹಾಗೆಯೇ ಹೂವಿನ ಹಾರವನ್ನು ಹಾಕಿ ನಂತರ ವಿವಾಹದಲ್ಲಿ ಅಕ್ಕಿಕಾಳನ್ನು ಹೇಗೆ ಬಳಸುತ್ತಾರೋ ಅದೇ ರೀತಿಯಾಗಿ ಎಲ್ಲರೂ ಸೇರಿ ಅಕ್ಕಿಕಾಳನ್ನು ಹಾಕುತ್ತಾರೆ. ನಂತರ ಹಾಲು, ತುಪ್ಪವನ್ನು ಬಿಡುತ್ತಾರೆ. ಕೊನೆಗೆ ಎಲ್ಲರೂ ಪೂಜೆ ಮಾಡಿ ಸತ್ತವರ ಕಾಲಿಗೆ ಬಿದ್ದು ಆಶಿರ್ವಾದ ಪಡೆಯುವುದು ಹಿಂದೂ ಸಂಪ್ರದಾಯವಾಗಿದೆ. ಸುಟ್ಟುಕೊಂಡು ಸತ್ತಂತಹ ಹೆಣ್ಣು ಮಕ್ಕಳನ್ನು, ಗರ್ಭಿಣಿಯರನ್ನು, ಅಪಘಾತದಲ್ಲಿ ಸತ್ತವರನ್ನು ಸಹ ಸುಡುತ್ತಾರೆ.

ಪುರುಷರು ತೀರಿಕೊಂಡಂತಹ ಸಂದರ್ಭದಲ್ಲಿಯೂ ಸಹ ಹೆಣ್ಣು ಮಕ್ಕಳನ್ನು ಹೇಗೆ ಅಲಂಕಾರ ಮಾಡಿ ಮದುಮಗಳಂತೆ ಸಿಂಗಾರ ಮಾಡುತ್ತವೆಯೋ ಅದೇ ರೀತಿಯಾಗಿ ಪುರುಷನು ಸತ್ತಾಗಲೂ ಸಹ ಆತನಿಗೆ ಹೊಸ ಪಂಜೆ, ಅಂಗಿಯನ್ನು ಮದುಮಗನನ್ನಾಗಿ ಮಾಡುತ್ತಾರೆ. ನಂತರ ಚಟ್ಟವನ್ನು ಕಟ್ಟಿ ಪೂಜೆ ಮಾಡಿ ಹಾಲು, ತುಪ್ಪ ಬಿಟ್ಟು ಎಳ್ಳು ನೀರು ಬಿಡುತ್ತಾರೆ. ನಂತರ ಶವವನ್ನು ತೆಗೆದುಕೊಂಡು ಹೋಗುವಾಗ ಕೆಲ ಜನಾಂಗದವರು ಅಂಗಾತ ಮಲಗಿಸಿಕೊಂಡು ಹೋಗುತ್ತಾರೆ. ಇನ್ನೂ ಕೆಲವರನ್ನು ಕುರಿಸಿಕೊಂಡು ಹೋಗುತ್ತಾರೆ. ಬಸವಿಯರನ್ನು ಅಥವಾ ದೇವದಾಸಿಯರನ್ನು ಬಾಳೆಯ ಎಲೆಯ ಮೇಲೆ ತೆಗೆದುಕೊಂಡು ಹೋಗುತ್ತಾರೆ. ವಿವಾಹವಾಗದೆ ಇದ್ದವರಿಗೆ ಹಾಗೂ ಪಿಟ್ಸ್ ಬಂದು ಸತ್ತು ಹೋದರೆ ಅಂತವರನ್ನು ಗೋಣಿಚೀಲದಲ್ಲಿ ಒಯ್ಯುತ್ತಾರೆ.

**ಗ್ರಾಮಗಳಲ್ಲಿ ಶಿಕ್ಷಣ ವ್ಯವಸ್ಥೆ:**

ಜ್ಞಾನ, ತಿಳುವಳಿಕೆ, ಬುದ್ಧಿವಂತಿಕೆ ಎಂಬುದು ಒಂದಾನೊಂದು ಕಾಲದಲ್ಲಿ ಬ್ರಾಹ್ಮಣ ವರ್ಗದವರಲ್ಲಿ ಹಾಗೂ ರಾಜ-ಮಹಾರಾಜರ ಮಕ್ಕಳಿಗಷ್ಟೆ ಸೀಮಿತವಾಗಿತ್ತು. ಹಿಂದಿನ ಕಾಲದಲ್ಲಿ ಅರಣ್ಯಗಳಲ್ಲಿ ನಿರ್ಜನ ಪ್ರದೇಶಗಳಲ್ಲಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ರಾಜ-ಮಹಾರಾಜರ ಮಕ್ಕಳಿಗೆ ಅರಮನೆಗೆ ಪಂಡಿತರು ಬಂದು ಪಾಠ ಹೇಳಿಕೊಡುತ್ತಿದ್ದರು. ಕಾಲ

ಕಳೆದಂತೆ ಶಿಕ್ಷಣ ಎಂಬುದು ಪ್ರತಿಯೊಬ್ಬರು ಪಡೆಯಲೇ ಬೇಕಾದ ಒಂದು ಕರ್ತವ್ಯವಾಗಿ ಪರಿವರ್ತನೆಯಾಯಿತು.

ನಮ್ಮ ಭಾರತವು ಕೃಷಿ ಪ್ರಧಾನ ರಾಷ್ಟ್ರವಾಗಿದೆ. ಇಲ್ಲಿನ ಬಹು ಸಂಖ್ಯೆಯ ಜನರು ಶತ-ಶತಮಾನಗಳಿಂದ ಕೃಷಿಯನ್ನೇ ತಮ್ಮ ಪ್ರಮುಖ ಉದ್ಯೋಗವನ್ನಾಗಿ ಅನುಸರಿಸುತ್ತಾ ಬಂದಿದ್ದಾರೆ. ಇಂದಿಗೂ ಶೇ ೭೦ಕ್ಕಿಂತಲೂ ಅಧಿಕ ಸಂಖ್ಯೆ ಜನರು ಕೃಷಿಯನ್ನು ತಮ್ಮ ಪ್ರಮುಖ ವೃತ್ತಿಯನ್ನಾಗಿ ಅವಲಂಬಿಸಿರುವರು. ನಮ್ಮಲ್ಲಿ 'ಬೇಸಾಯ ನೀ ಸಾಯ ಮನೆಮಂದೆಲ್ಲಾ ಸಾಯ' ಎಂಬ ಗಾದೆ ಮಾತಿದೆ. ಇದಕ್ಕೆ ಸಮಯ ಸಂದರ್ಭಗಳಲ್ಲಿ ಎಷ್ಟು ಜನರಿದ್ದರೂ ಸಾಕಾಗುವುದಿಲ್ಲ. ಇದರಿಂದ ಮನೆಯಲ್ಲಿ ಹುಟ್ಟಿದ ಎಲ್ಲಾ ಮಕ್ಕಳನ್ನು ಶಾಲೆಗೆ ಕಳಿಸುತ್ತಿದ್ದಿಲ್ಲ. ನಂತರದ ದಿನಗಳಲ್ಲಿ ಶಿಕ್ಷಣದ ಪ್ರಾಮುಖ್ಯತೆಯು ಹಳ್ಳಿಯ ಜನಕ್ಕೆ ತಿಳಿದ ಮೇಲೆ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಲು ಮುಂದಾಗಿದ್ದಾರೆ. ಮಕ್ಕಳ ಶಿಕ್ಷಣಕ್ಕಾಗಿ ಸರ್ಕಾರವು ಸಹ ಹಲವಾರು ವಿಭಿನ್ನವಾದಂತಹ ಯೋಜನೆಗಳನ್ನು ಹಾಕಿಕೊಂಡಿದೆ.

ಗ್ರಾಮೀಣ ಮಕ್ಕಳಿಗೆ ರಾತ್ರಿ ಶಾಲೆಗಳು, ಟುಟ ಶಾಲೆಗಳನ್ನು ಸರ್ಕಾರ ಸ್ಥಾಪಿಸಿದೆ. ಅಲ್ಲಿ ಆಟ-ಪಾಠಗಳನ್ನು ಕ್ರೀಡಾ ಸ್ಪರ್ಧೆಗಳನ್ನು, ಹರಿಕಥೆ, ಭಜನೆ, ನಾಟಕ, ಯಕ್ಷಗಾನ, ಜಾನಪದ ಗೀತೆ, ಗಾಯನ ಮೇಳ ಮೊದಲಾದ ವಿವಿಧ ಕಾರ್ಯಕ್ರಮಗಳನ್ನು ವಿಶೇಷ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಕ್ಕೆ ತರಲು ಸತತವಾಗಿ ಶ್ರಮಿಸಲಾಗುತ್ತಿದೆ. ಈ ಕಾರ್ಯಕ್ರಮಗಳಲ್ಲಿ ಗ್ರಾಮೀಣ ಜನರು, ತಮ್ಮ ಜಾತಿ, ಮತ ವರ್ಗ ಭೇದ ಮರೆತು ಭಾಗವಹಿಸಲು ಹೆಚ್ಚಿನ ಪ್ರೇರಣೆ ನೀಡಲಾಗುತ್ತಿದೆ. ಸರ್ಕಾರವು ಗ್ರಾಮದ ಮಕ್ಕಳನ್ನು ಶಾಲೆಯತ್ತ ಕರೆದೊಯ್ಯಲು ಅನೇಕ ರೀತಿಯ ಯೋಜನೆಗಳನ್ನು ಜಾರಿಗೆ ತಂದಿದೆ. ಎಲ್ಲಾ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಜಾತಿಯವರಿಗೆ ಊಟ, ವಸತಿ ನಿಲಯಗಳ ವ್ಯವಸ್ಥೆ ಬಟ್ಟೆ, ಪುಸ್ತಕ, ನೋಟ್‌ಬುಕ್, ಸೈಕಲ್ ವ್ಯವಸ್ಥೆಗಳನ್ನು ಮಾಡಲಾಗಿದೆ. ಹಾಗೆಯೇ ಸಮುದಾಯ ದತ್ತಶಾಲೆ, ಚೈತನ್ಯ ಕಾರ್ಯಕ್ರಮ, ಬಾ ಮರಳಿ ಶಾಲೆಗೆ, ಬಾ ಬಾ ಮರಳಿ ಶಾಲೆಗೆ, ಕೂಲಯಿಂದ ಶಾಲೆಗೆ, ಚಿಣ್ಣರ ಅಂಗಳ, ಇನ್ನೂ ಮುಂತಾದ ಕಾರ್ಯಕ್ರಮಗಳನ್ನು ಸರ್ವಶಿಕ್ಷ ಅಭಿಯಾನದ ಯೋಜನೆಯಡಿಯಲ್ಲಿ ಶಾಲೆಗಳ ಅಭಿವೃದ್ಧಿಗೆ ಸರ್ಕಾರ ಶ್ರಮಿಸುತ್ತಿದೆ. ಈ ಎಲ್ಲಾ ಯೋಜನೆಗಳಿಂದ ಗ್ರಾಮೀಣ ಶಿಕ್ಷಣದ ಗುಣಮಟ್ಟ ಸುಧಾರಣೆಗೊಂಡು ಇಂದಿನ ದಿನಮಾನಗಳಲ್ಲಿ ಗ್ರಾಮದ ಶಿಕ್ಷಣವೇ ಹೆಚ್ಚಾಗಿರುವುದನ್ನು ಕಾಣಬಹುದಾಗಿದೆ.

# ಅಧ್ಯಾಯ ಮೂರು
# ಕಥೆಗಳಲ್ಲಿ ಗ್ರಾಮ ಸಮಾಜದ ಸ್ವರೂಪ

೩.೧. ಮನುಷ್ಯ ಸಂಬಂಧಗಳ ಸ್ವರೂಪ

೩.೨. ಸಮುದಾಯ ಸಂಬಂಧಗಳ ಸ್ವರೂಪ

೩.೩. ಕುಟುಂಬ ಸಂಬಂಧಗಳ ಸ್ವರೂಪ

೩.೪. ದಾಂಪತ್ಯ ಹಾಗೂ ವಿಷಯ ದಾಂಪತ್ಯ

೩.೫. ಸಂಘರ್ಷದಿಂದ ಸಾಮರಸ್ಯದೆಡೆಗೆ

೩.೬. ಗ್ರಾಮೀಣ ಸಂಪ್ರದಾಯಗಳು

- ೬.೧ ಮೂಢನಂಬಿಕೆಗಳು
- ೬.೨ ಸಂಸ್ಕಾರಗಳು
- ೬.೩ ಧಾರ್ಮಿಕ ಆಚರಣೆಗಳು
- ೬.೪ ಬಡತನ ಹಾಗೂ ಶಿಕ್ಷಣ
- ೬.೫ ಬದಲಾವಣೆಯತ್ತ ಗ್ರಾಮ ಸಮಾಜ

# ಅಧ್ಯಾಯ ಮೂರು

## ಕಥೆಗಳಲ್ಲಿ ಗ್ರಾಮ ಸಮಾಜದ ಸ್ವರೂಪ

ಡಾ. ಕರೀಗೌಡ ಬೀಚನಹಳ್ಳಿ ಅವರ ಇದುವರೆಗಿನ ಕಥೆಗಳನ್ನು ಗಮನಿಸಿದಾಗ ಅವು ಅವರ ಚಿಕ್ಕಂದಿನ ಕಾಲದ ಅವರ ಊರಿನ ಅನುಭವಗಳು ಕತೆಗಳ ರೂಪದಲ್ಲಿ ನಿರೂಪಣೆಗೊಂಡಿವೆ. ಸಹಜ ಬದುಕಿನ ಗ್ರಾಮೀಣ ಸಂಸ್ಕೃತಿಯನ್ನು ಆಧಾರವಾಗಿ ಇಟ್ಟುಕೊಂಡು, ಕಥೆಗಾರರು ತಮ್ಮ ಭೌದ್ಧಿಕತೆಯನ್ನು, ವೈಚಾರಿಕತೆಯನ್ನು ಕಥೆಯ ಒಡಲೊಳಗೆ ತುಂಬಲು ಪ್ರಯತ್ನಿಸಿ ಸಫಲರಾಗಿದ್ದಾರೆ. ಇವರ ಕಥೆಗಳಲ್ಲಿ ಪ್ರಮುಖವಾಗಿ ಮನುಷ್ಯ ಸಂಬಂಧಗಳು ಸಮುದಾಯಗಳು, ಕುಟುಂಬಗಳು, ದಾಂಪತ್ಯ, ವಿಷಮ ದಾಂಪತ್ಯ, ಧಾರ್ಮಿಕ ಆಚರಣೆಗಳು, ಶಿಕ್ಷಣ, ಬಡತನ, ಹಳ್ಳಿ ಮನೆಗಳ ಸ್ವರೂಪ, ಶವ ಸಂಸ್ಕಾರ ಮಾಡುವ ಪದ್ಧತಿ, ಹಳ್ಳಿ, ನಗರಗಳ ಸಂಬಂಧ, ಬದಲಾಗುತ್ತಿರುವ ಗ್ರಾಮೀಣ ಜನತೆ ಇನ್ನೂ ಮುಂತಾದ ಅಂಶಗಳ ಸ್ವರೂಪವನ್ನು ಒಳಗೊಂಡು ಕಥೆಗಳು ರಚನೆಗೊಂಡಿವೆ.

### ೩.೧. ಮನುಷ್ಯ ಸಂಬಂಧಗಳ ಸ್ವರೂಪ:

ಮನುಷ್ಯ ಸಂಘ ಜೀವಿಯೂ ಹೌದು, ಸಮಾಜ ಜೀವಿಯೂ ಹೌದು ಮನುಷ್ಯನಿಗೂ ಸಮಾಜಕ್ಕೂ ನಿಕಟವಾದ ಸಂಬಂಧವಿದೆ. ಸಮಾಜವನ್ನು ಬಿಟ್ಟು ಮನುಷ್ಯ ಬದುಕಲಾರ. ಮಾನವ (ಜೀವಿಯು) ಒಂದಲ್ಲಾ ಒಂದು ರೀತಿಯಲ್ಲಿ ಸಮಾಜವನ್ನು ಅವಲಂಬಿಸಿ ಜೀನವ ನಡೆಸುತ್ತಾನೆ. ಡಾ. ಕರೀಗೌಡ ಬೀಚನಹಳ್ಳಿ ಅವರು ತಮ್ಮ ಕಥೆಗಳಲ್ಲಿ ಮನುಷ್ಯ ಸಂಬಂಧಕ್ಕೆ ಅನ್ವಯಿಸುವಂತಹ ಕಥೆಗಳನ್ನು ಬರೆದಿದ್ದಾರೆ. ವ್ಯಕ್ತಿಯು ಸಮಾಜ ಮುಖಿಯಾಗಿ ಬಾಳುವ ಸಂಸಾರ ನಡೆಸುವಂತಹ ಕೆಲ ರಹದಾರಿಗಳನ್ನು ಅವರ ಕಥೆಗಳಲ್ಲಿ ಕಾಣಬಹುದಾಗಿದೆ. 'ಒಂದು ಅಪೂರ್ವ ಸಂಸಾರ', 'ಕೋಳಿ ಪಾಲು', 'ಗೌರಿ', 'ಕಲ್ಯಾಣಿ', 'ಹಂದಿ ಲಕ್ಕವ್ವ', 'ಅವಮಾನ' ಮುಂತಾದ ಹತ್ತಾರು ಕಥೆಗಳು ಅಪ್ಪಟ ಗ್ರಾಮೀಣ ಬದುಕಿನ ಅನುಭವಗಳಾಗಿ, ಗಂಡು-ಹೆಣ್ಣು, ಕುಟುಂಬ ಮತ್ತು ಊರೊಳಗಿನ ಮನುಷ್ಯ ಸಂಬಂಧಗಳ ಸಂಕೀರ್ಣತೆಯನ್ನು ಒಳಗೊಂಡಿದೆ.

ಮನುಷ್ಯ ಸಂಬಂಧವನ್ನು ಇಲ್ಲಿ ಕೇವಲ ವ್ಯಕ್ತಿ-ವ್ಯಕ್ತಿಗಳ ನಡುವೆ ಗುರುತಿಸುವುದು ಕಷ್ಟಾಗುತ್ತದೆ. ವ್ಯಕ್ತಿಯು ದಿನನಿತ್ಯ ಬೆಳಗಿನಿಂದ ಸಂಜೆಯ ತನಕ ಯಾವ-ಯಾವ ಕಾರ್ಯದಲ್ಲಿ

ತೊಗಿರುತ್ತಾನೋ ಅವುಗಳೊಂದಿಗೆ ತನ್ನ ಸಂಬಂಧವನ್ನಿಟ್ಟುಕೊಂಡಿರುತ್ತಾನೆ. "ಒಂದು ಅಪೂರ್ವ ಸಂಸಾರ" ಕಥೆಯಲ್ಲಿ 'ಸಾಬುಲಾಲು' ಮಮ್ತಾಜ್ ಬೂಬಮ್ಮ, ಬೇಗಂ, ಅಜೀದ್, ಅತ್ತರ್ ಪಾತ್ರಗಳು ಪ್ರಮುಖವಾದವು. ಈ ಎಲ್ಲಾ ಪಾತ್ರಗಳು ದಿನ ಬೆಳಗಾಗುತ್ತಿದ್ದಂತೆ ಒಂದಲ್ಲಾ ಒಂದು ಕೆಲಸಕ್ಕೆ ಅಣಿಯಾಗಿ ಅವುಗಳ ಜೊತೆ ತಮ್ಮ ಶ್ರಮವನ್ನು ಹಂಚಿಕೊಳ್ಳುತ್ತವೆ. ಮನುಷ್ಯನು ತನ್ನ ಹೊಟ್ಟೆ ಪಾಡಿಗಾಗಿ ಏನೆಲ್ಲಾ ಕೆಲಸಗಳನ್ನು ಮಾಡಬೇಕಾದ ಸಂದರ್ಭಗಳು ಒದಗಿ ಬರುತ್ತವೆ. ತನ್ನ ಆಸೆ ಈಡೇರುವುದೇನೋ ಎಂಬ ತವಕದಿಂದ ವ್ಯಕ್ತಿಯು ಕೆಲಸಕ್ಕೆ ಶ್ರಮ ಕೊಡುವ ಕಾರ್ಯ ಮಾಡುತ್ತಾನೆ. 'ಸಾಬುಲಾಲು' ದಿನನಿತ್ಯ ಮೀನುಗಳನ್ನು ಹಿಡಿಯಲು ಬಳಸುವ ಗಾಳ ಅದಕ್ಕೆ ಬೇಕಾದ ಎರೆಹುಳಗಳ ಜೊತೆ ಸಂಬಂಧವಿಟ್ಟುಕೊಂಡಿರುತ್ತಾನೆ. ಅಂದರೆ ಇಲ್ಲಿ 'ಸಾಬುಲಾಲು'ನ ಹೊಟ್ಟೆ ತುಂಬಿಸುವ ಕೆಲಸ ಗಾಳ ಮತ್ತು ಎರೆಹುಳಗಳು ಮಾಡತ್ತವೆ. ಅದರಿಂದ ಅವನು ಅವುಗಳ ಸಂಗಡ ಸಂಬಂಧ ಬೆಳೆಸುತ್ತಾನೆ. 'ಸಾಬುಲಾಲು'ಗೆ 'ಗಾಳ' ಮತ್ತು ಎರೆಹುಳುಗಳು ಜೀವನಾಶ್ಯಕ ವಸ್ತುಗಳನ್ನು ಒದಗಿಸಿ ಕೊಡುತ್ತವೆ. ಕೆರೆಯಲ್ಲಿ ಕಂಡು ಬರುವಂತಹ ಒಂದು ಕಲ್ಲು ಬಳಪದ ಕಲ್ಲಂತಾಗಿತ್ತು. ಅದು ಸಾಬುಲಾಲು ಕೂತು ಮೀನು ಹಿಡಿಯುವ ಸ್ಥಳವಾಗಿತ್ತು. ಒಂದು ಕಲ್ಲು ಬಳಪದ ಕಲ್ಲಿನಂತಾಗಬೇಕೆಂದರೆ ಸುಮಾರು ವರ್ಷಗಳು ಬೇಕು. ಈ ಬಳಪದ ಕಲ್ಲು ಸಾಬುಲಾಲು ಎಷ್ಟು ವರ್ಷಗಳಿಂದ ಮೀನು ಹಿಡಿಯುವ ಕಾರ್ಯ ಮಾಡಿದ್ದಾನೆ ಎಂಬುದನ್ನು ತಿಳಿಸಿಕೊಡುತ್ತದೆ. ಇದರಿಂದ 'ಸಾಬುಲಾಲು'ವಿನ ದಿನ ನಿತ್ಯದ ಕೆಲಸ ಮೀನು ಹಿಡಿಯುವುದಾಗಿತ್ತು ಎಂದು ತಿಳಿದು ಬರುತ್ತದೆ.

'ಮಮ್ತಾಜ್ ಬೂಬಮ್ಮ'ಳು ಸಹ ಸಂಸಾರವನ್ನು ನೀಗಿಸಿಕೊಂಡು ಹೋಗುವ ತವಕದಲ್ಲಿದ್ದಳು. ಈಕೆಯು ಒಪ್ಪೊತ್ತಿನ ಊಟಕ್ಕೆ ಏನೆಲ್ಲಾ ಕಸರತ್ತು ನಡೆಸುತ್ತಿದ್ದವಳು ಎಂದರೆ, ಪೊಲೀಸ್ ಪೆದೆಗಳಿಗೆ ಅಡಿಗೆ ಮಾಡುವ ಕೆಸಕ್ಕೆ ಹೋಗಿ ಅಲ್ಲಿ ಉಳಿದ ಅನ್ನ ತೆಗೆದುಕೊಂಡು ಬಂದು ಮಕ್ಕಳಿಗೆ ನೀಡುತ್ತಿದ್ದಳು. ತಮ್ಮ ಮಕ್ಕಳನ್ನು ಸೈಕಲ್ ಶಾಫ್‌ನಲ್ಲಿ ಕೆಲಸಕ್ಕೆ ಸೇರಿದ್ದಳು. ಗಂಡ-ತಾನು-ಮಕ್ಕಳು ದುಡಿದರೂ ಸಹ ದಿನದಲ್ಲಿ ಒಂದೊಪ್ಪತ್ತು ಒಳ್ಳೆಯ ಊಟ ಮಾಡಲಾಗುವುದಿಲ್ಲ. ಇದಕ್ಕೆಲ್ಲಾ ಕಾರಣ ಬಡತನ, ಅನಕ್ಷರತೆಯು ಅವರಲ್ಲಿ ತಾಂಡವವಾಡುತ್ತಿರುವುದಾಗಿತ್ತು. ಬಡತನ ಎಂಬುದು ಕಿತ್ತು ತಿನ್ನುವ ಗೋಜಿಗೆ ಹೂಯ್ಯುತ್ತದೆ. ತಾಯಿ 'ಮಮ್ತಾಜ್ ಬೂಬಮ್ಮ' ಹಬ್ಬಕ್ಕೆ ಅಡಿಗೆ ಮಾಡಲು ಎಷ್ಟು ಹೆಣಗಿದರೂ ಸಾಧ್ಯವಾಗದೆ ಎಲ್ಲರ ಮೇಲೆ ಕೋಪಿಸಿಕೊಳ್ಳವುದೊಂದೇ ಆಗುತ್ತದೆ. ಇದೇ ರೀತಿಯಲ್ಲಿ 'ಕೋಳಿಪಾಲು' ಕಥೆಯಲ್ಲಯು ಸಹ 'ಚೆನ್ನವ್ವ' ಕೋಪಿಸಿಕೊಂಡಿರುತ್ತಾಳೆ. ತನ್ನ ಮನೆಯ ಮೊಟ್ಟೆ ಕೋಳಿಯನ್ನು ಕಳವಾಗಿದ್ದರ ಸಲುವಾಗಿ ಕೋಪಿಸಿಕೊಂಡು ಎದುರು ಮನೆಯ ಕರಿಯಮ್ಮನನ್ನು ಮನಸ್ಸಿನಲ್ಲಿಟ್ಟುಕೊಂಡು ಎಲ್ಲಾ ವಿಷಯವನ್ನು ಗೆಳತಿ 'ಈರಕ್ಕ'ನ ಹತ್ತಿರ ಹೇಳುತ್ತಾಳೆ. ಅಂದರೆ ಇಲ್ಲಿ ವ್ಯಕ್ತಿಯು ತನ್ನ ಜೀವನವನ್ನು ಪ್ರಾಣಿ-ಪಕ್ಷಿಗಳ ಜೊತೆಗೆ ಸೇರಿಸಿಕೊಂಡು ಜೀವನ ನಡೆಸುತ್ತಿರುತ್ತಾರೆ. ವ್ಯಕ್ತಿಯ ಬೆಳವಣಿಗೆಗೆ ಪ್ರಾಣಿ-ಪಕ್ಷಿಗಳು ಸಹ ನೆರವಾಗುತ್ತವೆ ಎಂಬುದನ್ನು ಇಲ್ಲಿ ಮನಗಾಣಬಹುದಾಗಿದೆ. 'ಕೋಳಿಪಾಲು' ಕಥೆಯು ಒಂದು ಕುಟುಂಬದ ಕಥೆಯನ್ನಷ್ಟೇ

ಪ್ರತಿಬಿಂಬಿಸುವುದಿಲ್ಲ, ಜೊತೆಗೆ ಸಾಮಾಜಿಕ ಹಾಗೂ ಸಮುದಾಯಗಳಲ್ಲಿ ಕಂಡು ಬರುವ ಹಲವು ಕುಟುಂಬಗಳ ಕಥೆಯನ್ನು ತಿಳಿಸಿಕೊಡುತ್ತದೆ. ಕೋಳಿಪಾಲು ಕಥೆಯಲ್ಲಿ ಕಂಡುಬರುವ ಕರಡಯ್ಯ ಮತ್ತು ಕೋಳಿಯನ್ನು ಕಳೆದುಕೊಂಡ ಚಿನ್ನವ್ವನ ಪಾತ್ರಗಳು ತುಂಬಾ ವಿಶಿಷ್ಟವಾದವುಗಳು. ಕರಡಯ್ಯ ಮತ್ತು ಆತನ ಸ್ನೇಹಿತರು ಸೇರಿ ಮೊಟ್ಟೆಕೋಳಿಯನ್ನು ತಿಂದ ಸಡಗರ ಒಂದು ಕಡೆಯಾದರೆ ಕೋಳಿಯನ್ನು ಕಳೆದುಕೊಂಡ ಚಿನ್ನವ್ವನ ಸಂಕಟ ಮತ್ತೊಂದು ಕಡೆಯಿದೆ. ಈ ಎರಡು ಅಂಶಗಳಿಂದ ತಿಳಿದು ಬರುವುದೇನೆಂದರೆ ಹಸಿವನ್ನು ನೀಗಿಸಿಕೊಂಡವರ ಮನೋವೃತ್ತಿ ಹಸಿವಿನಿಂದ ಬಳಲುತ್ತಿರುವವರಮನೋವೃತ್ತಿಗಳು ಕಂಡು ಬರುತ್ತವೆ. ಇಲ್ಲಿ ಎರಡು ಆತಂಕಗಳನ್ನು ಗುರುತಿಸಬಹುದು. ಒಂದು, ಕೋಳಿಯನ್ನು ತಿಂದು ತಿಂದಿಲ್ಲ ಎನ್ನುವ ಕರಡಯ್ಯನ ಮನಸ್ಸಿನಲ್ಲಿ ನಡೆಯುವ ಆತಂಕ ಹಾಗೂ ಚಿನ್ನವ್ವ ಕೋಳಿಯನ್ನು ಕಳೆದುಕೊಂಡಾಗ ಅದರ ಬಗ್ಗೆ ಪರಿತಪಿಸುವಾಗ ಕೋಳಿಯನ್ನು ತಿಂದವನು ನಾನೇ ಎಂದು ಹೇಳಲೋ ಬೇಡವೋ ಎಂದುಕೊಳ್ಳುತ್ತಿದ್ದ ಚಿನ್ನವ್ವನ ಮಗ. ಇವರಿಬ್ಬರ ಆತಂಕವು ಕಥೆಯ ಕೊನೆಯಲ್ಲಿ ತೆರೆ ಕಾಣುತ್ತದೆ.

ಮನುಷ್ಯ ಸಂಬಂಧಗಳು ವಿಭಿನ್ನತೆಯಿಂದ ಕೂಡಿರುತ್ತವೆ. ಈ ಸಂಬಂಧಗಳು ವಿಭಿನ್ನತೆಯಿಂದ ಕೂಡಿರಲು ಕೆಲವು ಕಾರಣಗಳಿರುತ್ತವೆ. ಅವರು ಬೆಳೆದಿರುವಂತಹ ಕುಟುಂಬದ ಪರಿಸರ, ಊರಿನ ಪರಿಸರ, ಜನಾಂಗದ ಪರಿಸರ ವಿಭಿನ್ನತೆಯಿಂದ ಕೂಡಿರುವುದರಿಂದ ಸಂಬಂಧಗಳು ಸಹ ಭಿನ್ನತೆಯಿಂದ ಕೂಡಿರುತ್ತವೆ. ವಿಭಿನ್ನತೆಯ ದೃಷ್ಟಿಕೋನವನ್ನು ಡಾ. ಕರೀಗೌಡ ಬೀಚನಹಳ್ಳಿಯವರು ಬರೆದಿರುವ 'ಗೌರಿ' ಕಥೆಯಲ್ಲಿ ಕಾಣಬಹುದು. 'ಬೊಂಡಾದ ಗುಂಡಮ್ಮ' ತನ್ನ ಸಂಬಂಧವನ್ನು ಹಳ್ಳಿಗಳ ಜೊತೆಯಲ್ಲಿ ಮೈಗೂಡಿಸಿಕೊಂಡಿದ್ದಳು. ಆಕೆಯು ಅಂಗಡಿಯ ವಸ್ತುಗಳನ್ನು ಮಾರಾಟ ಮಾಡಲು ಹಳ್ಳಿಗೆ ಹೋಗುತ್ತಿದ್ದಳು. ಅಲ್ಲಿ ಆಕೆಯು ಎಲ್ಲಾ ರೀತಿಯಿಂದಲೂ ಸಂಬಂಧವನ್ನಿಟ್ಟು ಕೊಂಡಿದ್ದಳು. ಅಲ್ಲಿದ್ದಂತಹ ವಿದ್ಯಾರ್ಥಿಗಳು ಗುಂಡಮ್ಮನ ತಿಂಡಿತಿನಿಸುಗಳನ್ನು ಕದಿಯಲು ಅವರು ಮಾಡುವಂತಹ ಕಿಡಿಗೇಡಿತನ ಅತ್ಯಂತ ವಿಶಿಷ್ಟವಾದದ್ದು. ಹಾಗಯೇ ಈ ಕಥೆಯಲ್ಲಿ ವಿಶೇಷವಾದದ್ದನ್ನು ಗುರುತಿಸುವುದೆನೆಂದರೆ ವಿಷಯ ವಿವಾಹ. ಕಥೆಯ ಕೇಂದ್ರ ಬಿಂದುವಾಗಿರುವ 'ಗೌರಿ' 'ಹಿಂದೂ' ಸ್ತ್ರೀಯಾಗಿದ್ದು 'ಮುಸ್ಲಿಂ' ಜನಾಂಗದ 'ಮಹಮದ್' ಎಂಬುವವನ ಜೊತೆ ಓಡಿ ಹೋಗಿ ವಿವಾಹವಾದದ್ದು ವಿಶೇಷತೆಯನ್ನು ಸೂಚಿಸುತ್ತದೆ. ಇಲ್ಲಿ ಹಿಂದೂ–ಮುಸ್ಲಿಂ ಬಾಂದವ್ಯವನ್ನು ಗುರುತಿಸಬಹುದು. 'ಗೌರಿ' ಮತ್ತು 'ಮಹಮದ್'ರಿಗೆ ಹುಟ್ಟಿದ ಮಗುವಿಗೆ 'ವರುಣ್ ಮಹಮದ್' ಎಂಬ ಹೆಸರಿಟ್ಟಿರುವುದು ಸಹ ಹಿಂದೂ–ಮುಸ್ಲಿಂ ಬಾಂದವ್ಯವಾಗಿದೆ. ಪ್ರಮುಖವಾಗಿ ಕಥೆಯನ್ನು ಕಥೆಯಾಗಿ ಬರೆದು ಪತ್ರಿಕೆಯಲ್ಲಿ ಪ್ರಕಟಿಸಿದ ನಂತರ ಕಥೆಗಾರನನ್ನು ಭೇಟಿಯಾಗಲು ಬಂದಂತಹ 'ಗೌರಿ' ಮತ್ತು 'ಮಹಮದ್'ರನ್ನು ಕಥೆಗಾರನು ಕುಣ ಹಿಡಿಯಲಾಗದ ಪ್ರಸಂಗ ಅತ್ಯಂತ ವಿಶಿಷ್ಟವಾದದ್ದು. ನಂತರ 'ಗೌರಿ'ಯು ನಾನು

ಗುಂಡಮ್ಮನ ಮೊಮ್ಮಗಳು ಎಂದು ಹೇಳಿದಾಗ ಕಥೆಗಾರನ ಮುಖದಲ್ಲಿ ಅರಳುವ ಮುಖಭಾವವು ಕಥೆಯ ವಿಭಿನ್ನ ದೃಷ್ಟಿಕೋನಗಳನ್ನು ನೀಡುತ್ತದೆ.

ಡಾ. ಕರೀಗೌಡ ಬೀಚನಹಳ್ಳಿಯವರು ತಮ್ಮ ಕಥೆಗಳಲ್ಲಿ ಸ್ತ್ರೀಯರ ಪಾತ್ರಗಳನ್ನು ವಿಭಿನ್ನ ರೀತಿಯಲ್ಲಿ ಚಿತ್ರಿಸಿದ್ದಾರೆ. ಇದು ಕೇವಲ ತಾವು ಕಂಡ ಸಂಸಾರದ ಸ್ಥಿತಿಗತಿಯಾಗಿರದೇ ಒಟ್ಟಾರೆ ಒಂದು ಸಮುದಾಯವನ್ನು ಕೇಂದ್ರ ಬಿಂದುವಾಗಿಟ್ಟುಕೊಂಡು ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಇದರಿಂದ ಸಮಾಜದ ಜನತೆಯು ಎಚ್ಚರವಾಗಬೇಕೆಂದು ಇವರ ಸಂದೇಶವಾಗಿದೆ. ಸ್ತ್ರೀ ಪಾತ್ರದಲ್ಲಿಯು ಸಹ ಗಟ್ಟಿತನವಿದೆ. ಅತ್ಮವಿಶ್ವಾಸದಿಂದ ಆಕೆಯು ಪುರುಷನಂತೆ ಸಂಸಾರವನ್ನು ತೊಡಗಿಸಿಕೊಂಡು ಹೋಗಬಹುದು ಎಂಬುದನ್ನು ಒತ್ತಿ ಹೇಳುತ್ತದೆ. ಬೀಚನಹಳ್ಳಿ ಅವರು ಬರೆದಿರುವ 'ಕಲ್ಯಾಣಿ', 'ಗೌರಿ', 'ಹಂದಿ ಲಕ್ಕವ್ವ' ಮುಂತಾದ ಕಥೆಗಳಲ್ಲಿ ಸ್ತ್ರೀ ಪಾತ್ರಗಳನ್ನು ಚಿತ್ರಿಸಿರುವುದನ್ನು ನೋಡಬಹುದು. ಬೇರೆ ಬೇರೆ ಜಾತಿಯಲ್ಲಿ ವಿವಾಹವಾಗಿ ಸುಖದ ಜೀವನ ನಡೆಸುವ ದೃಶ್ಯವು 'ಗೌರಿ' ಕಥೆಯಲ್ಲಿ ಕಂಡು ಬಂದರೆ ಒಂದೇ ಜನಾಂಗದಲ್ಲಿ ಕುಡುಕ ವ್ಯಕ್ತಿಯನ್ನು ವಿವಾಹವಾಗಿ ತಾನು ಅನುಭವಿಸುವ ವೇದನೆಯು 'ಕಲ್ಯಾಣಿ' ಕಥೆಯಿಂದ ತಿಳಿದು ಬರುತ್ತದೆ. ಗಂಡ ಕುಡುಕನಾದರೂ ಸಹ ಅವನೇ ನನ್ನ ದೇವರು ಅವನೇ ನನ್ನ ಗಂಡ ಎಂದು ಗಟ್ಟಿ ಮನಸ್ಸಿನಿಂದ ಸಂಸಾರ ನಡೆಸುವ ದೃಷ್ಯ 'ಕಲ್ಯಾಣಿ' ಕಥೆಯಲ್ಲಿದೆ. ಕಲ್ಯಾಣಿಯನ್ನು ಕಂಡು ಆಕೆಯ ದೃಡ ನಿರ್ದಾರವನ್ನು ಕಂಡು ಊರಿನ ಜನತೆ ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

"ಕಲ್ಯಾಣಿ ಆಗಿರೋದಕ್ಕೆ ರಂಗಣ್ಣನ ಜತೆ ಸಂಸಾರ ಸಾಗಿಸ್ತಾ ಇದ್ದಾಳೆ. ಅವಳ ಸ್ಥಾನದಲ್ಲಿ ಬೇರೆ ಯಾರೇ ಹೆಂಗಸಿದ್ದರೂ ಇಷ್ಟೋತ್ತಿಗೆ ತಾಳಿ ಕಿತ್ತು ಕೈಗೆ ಕೊಟ್ಟು ತನ್ನ ತವರಿಗೆ ಓಡಿ ಹೋಗುತ್ತಿದ್ದಳು. ಆದರೆ ಕಲ್ಯಾಣಿ ಗೌರವಸ್ಥ ಕುಲಸ್ತರ ಮಗಳು. ಮಾನ ಮರ್ಯಾದೆ ಘನತೆ ಗೌರವಕ್ಕೆ ಅಂಜಿಕೊಂಡು ಹೋಗ್ತಾ ಇದ್ದಾರೆ"

ಈ ಮೇಲಿನ ಅಭಿಪ್ರಾಯವನ್ನು ಇಟ್ಟುಕೊಂಡು ಒಟ್ಟು ಸಮಾಜದ ಸ್ತ್ರೀಯನ್ನು ಅಳೆಯಲು ಸಾಧ್ಯವಾದೀತೆ ಎಂಬುದನ್ನು ಯೋಚಿಸಿದರೆ, ಪುರಾತನ ಕಾಲದ ಸ್ತ್ರೀಯರ ವ್ಯಕ್ತಿತ್ವ ಹಾಗೂ ಕಲ್ಯಾಣಿಯ ವ್ಯಕ್ತಿತ್ವದಂತೆ ರೂಪಗೊಂಡಿತ್ತು. ಆದರೆ ಇಂದಿನ ಸ್ತ್ರೀಯರ ನಡುವಳಿಕೆ, ವಿದೇಶಿಯತೆಯನ್ನು ಮೈಗೂಡಿಸಿಕೊಂಡಿದ್ದಾರೆ. ಆದ್ದರಿಂದ ಸ್ತ್ರೀಯಾದವಳು ಒಂದೇ ಹಿತದೃಷ್ಟಿಯನ್ನಿಟ್ಟುಕೊಂಡು ಸಂಸಾರ ನಡೆಸುವ ಅಷ್ಟೋಂದು ಸಮಂಜಸವಲ್ಲ ಎನಿಸುತ್ತದೆ. ಕಲ್ಯಾಣಿಯು ಕೊನೆಗೆ ಗೌಡರ ಬುದ್ಧಿವಾದದಿಂದ, ಬುದ್ಧಿಮಾತಿನಿಂದ ತಾನು ತನ್ನ ಮಕ್ಕಳ ಸಮೇತ ಸ್ವಾಮೀಜಿಯ ಅಡಿಯಾಳಾಗಿ ದುಡಿಯುವ ಪ್ರಸಂಗ ಬರುತ್ತದೆ. ಕಥೆಯನ್ನು ಓದಿದ ನಂತರ ಗೌಡರ ಬಗ್ಗೆ ಒಳ್ಳೆಯ ಭಾವನೆ ಬರುತ್ತದೆ. ಆದರೆ ಅದನ್ನು ಒರೆಗಲ್ಲಿಹಚ್ಚಿ ನೋಡಿದರೆ ಗಂಡ-ಹೆಂಡಿರ ಸಂಸಾರ ಒಡೆದು ಮತ್ತೊಬ್ಬರ ಹತ್ತಿರ ಕೆಲಸಕ್ಕೆ ಸೇರಿಸಿ ಅವರನ್ನು ಸ್ವಾಮೀಜಿಯ ಗುಲಾಮರಾಗಿಸುವುದು ಎಷ್ಟರ ಮಟ್ಟಿಗಿನ ಒಳ್ಳೆಯ ಕಾರ್ಯವಾದೀತು? ಸ್ತ್ರೀಯಾದವಳು ಸಮಾಜದ ಜೊತೆ-ಜೊತೆಯಲ್ಲಿ ಹೊಂದಾಣಿಕೆಯ ಮೂಲಕ ಸಂಸಾರ

ನಡೆಸುವುದು ಒಳಿತಾಗಿದೆ. ಇದರಿಂದ ಮಹಿಳೆಯರಿಗೆ ಸಮಾಜದ ಒಳ್ಳೆಯ ಗೌರವದ ಸ್ಥಾನವಿರುತ್ತದೆ. ಸಮಾಜದಲ್ಲಿ, ಸಮುದಾಯಗಳಲ್ಲಿ ವಿಶಿಷ್ಟ ಭಾವನೆಗಳನ್ನು ಒಳಗೊಂಡ ವ್ಯಕ್ತಿಗಳಿರುತ್ತಾರೆ. ಮನುಷ್ಯರಲ್ಲಿ ಮತ್ತೊಬ್ಬ ಮನುಷ್ಯನಿರುತ್ತಾನೆ. ಸಮುದಾಯ-ಸಮಾಜಗಳಲ್ಲಿ ಮತ್ತೊಂದು ಸಮುದಾಯ ಸಮಾಜವಿರುತ್ತದೆ ಎಂಬುದನ್ನು ಬೀಚನಹಳ್ಳಿಯವರ ಕಥೆಗಳಲ್ಲಿ 'ಅವಮಾನ' ಕಥೆಯಲ್ಲಿ ಬರುವಂತಹ ಪಾತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಂತಹ ಅಂಶಗಳು ಕಂಡುಬರುತ್ತವೆ. ವ್ಯಕ್ತಿಯು ಸಮಯಕ್ಕೆ ತಕ್ಕಂತೆ ಯಾವ ರೀತಿಯಾಗಿ ಬದಲಾಗುತ್ತಾನೆ ಎಂಬುದನ್ನು ಈ ಕಥೆಯಿಂದ ತಿಳಿದುಕೊಳ್ಳಬಹುದು.

'ಅವಮಾನ' ಕಥೆಯು ಒಂದು ಅವಿಭಕ್ತ ಕುಟುಂಬದ ಕಥೆಯಾಗಿದೆ. ಈ ಕಥೆಯಲ್ಲಿ ಬರುವಂತಹ ಪ್ರತಿಯೊಬ್ಬರೂ ಸಹ ತಮ್ಮ ತಮ್ಮ ಜೀವನ ವಿಧಾನಗಳ ಆಧಾರದ ಮೇಲೆ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಒಬ್ಬ ವ್ಯಕ್ತಿಯು ತನ್ನ ಅಭಿಪ್ರಾಯವನ್ನು ಹೇಳಿದ ಮೇಲೆ, ಅದರ ಹಿನ್ನೆಲೆಯಾಗಿ ತನ್ನದೇ ಒಂದು ಸಮಾಜವಿರುತ್ತದೆ. ತನ್ನದೇ ಆದ ಜೀವನ ವಿಧಾನವನ್ನು ಕಟ್ಟಿಕೊಂಡಿರುತ್ತಾರೆ. ಒಬ್ಬ ಬರಹಗಾರ ತನ್ನ ಅನುಭವಗಳನ್ನು ಹಾಗೆಯೇ ಬರೆಯುವುದಿಲ್ಲ. ಬರಹದ ಮೂಲಕ ಇನ್ನೊಂದು ಸಮಾಜದ ದರ್ಶನ ಮಾಡಿಸುತ್ತಾನೆ. ಅವನು ಗ್ರಹಿಸಿ ಅಂಶಗಳನ್ನು ಶೋಧ ಮಾಡಬೇಕು. ಒಂದು ಹಳ್ಳಿ, ಕುಟುಂಬ, ಓಣಿ, ಜಾತಿ, ವ್ಯಕ್ತಿ, ಗುಂಪಿಗೆ ತನ್ನದೇ ಆದ ಜೀವನ ವಿಧಾನವಿರುತ್ತದೆ. ಒಂದೇ ಊರಲ್ಲಿ ಹತ್ತಾರು, ನೂರಾರು ಜೀವನ ವಿಧಾನವಿರುತ್ತದೆ. ಅಂತೆಯೇ 'ಚಿನ್ನವ್ವ' ಹಾಗೂ 'ಕರಿಸಿದ್ದೇಗೌಡ'ರ ಮನೆ ಸಂಬಂಧಿಕರಲ್ಲಿಯು ಸಹ ತಮ್ಮದೇ ಆದ ಜೀವನ ವಿಧಾನವಿತ್ತು.

ಒಂದೇ ಮನೆಯಲ್ಲಿ ಹುಟ್ಟಿ ಬೆಳೆದು ತಂದೆಯ ತಿಥಿಗೆ ತಾನು ಸಾಕಿದ ಹೋತವನ್ನು ಕೊಡುವುದಿಲ್ಲ. ಅದು ನನ್ನದು ಎಂದು ಹೇಳಿದಾಗ ಅಲ್ಲಿ ಅವನದೇ ಆದ ಜೀವನ ವಿಧಾನವಿದೆ ಎಂದರ್ಥ. ಹಣವನ್ನು ಕೊಡುತ್ತೇನೆ ಎಂದೇಳಿ ಒಪ್ಪಿಸಿ ನಂತರ ಹೋತ ಕೊಯ್ದು ಆದ ಮೇಲೆ ಹಣ ಕೊಡದಿರುವುದು ಮತ್ತೊಂದು ರೀತಿಯ ಜೀವನ ವಿಧಾನ. ಅಣ್ಣ ತಮ್ಮಂದಿರು ತಮ್ಮ ಜೀವನಕ್ಕೆ ಬೇಕಾದ ಸೌಲಭ್ಯಗಳನ್ನು ಬಳಸಿಕೊಳ್ಳುವುದು ಈ ಕಥೆಯಲ್ಲಿ ವಿಶೇಷವಾಗಿದೆ. ಚಂದ್ರಪ್ಪನ ಕನಸು ಭಗ್ನವಾದಾಗ ಅವನು ಕುಂಟುತ್ತಲೇ ಹೋಗಿ ಪೊಲೀಸ್‌ರಿಗೆ ಕಂಪ್ಲೆಟ್ ಕೊಟ್ಟಾಗ, ಅನುಭವಿಸುವ ರೀತಿ ನೋಡಿದರೆ ಜೀವನದ ವಿಧಾನದಲ್ಲಿ ಏನೇ ಬಂದರೂ ಸಹ ಸರಿದುಗಿಸಿಕೊಂಡು ಹೋಗಬೇಕು ಎಂದೆನಿಸುತ್ತದೆ. ತಮ್ಮನನ್ನು ಅಣ್ಣಂದಿರನ್ನು ಜೈಲಲ್ಲಿ ಹೊಡೆಯುವಾಗ, ಕುಂಟಪ್ಪ ಅಂದರೆ ಚಂದ್ರಪ್ಪನಿಗೆ ಬುದ್ಧಿ ಬರುತ್ತದೆ. ಕೇವಲ ೧೫೦ ರೂಪಾಯಿಗೋಸ್ಕರ ಇಡೀ ಮನಿಮಂದಿನೆಲ್ಲಾ ಮಾನಸಿಕವಾಗಿ ಹಿಂಸಿಸುವುದು ಸರಿಯಲ್ಲ ಎಂದೆನಿಸುತ್ತದೆ. ಹಾಗೆ ಒಂದು ಕುಟುಂಬದಲ್ಲಿ ಒಂದೇ ರೀತಿಯ ಭಾವನೆಗಳಿರುವುದಿಲ್ಲ. ಪ್ರತಿಯೊಬ್ಬರ ಹತ್ತಿರವೂ ಸಹ ತಮ್ಮದೇ ಆದಂತಹ ಜೀವನ ವಿಧಾನವನ್ನು ಕಟ್ಟಿಕೊಂಡಿರುತ್ತಾರೆ ಎಂಬುದನ್ನು 'ಅವಮಾನ' ಕಥೆಯಿಂದ ಗುರುತಿಸಬಹುದಾಗಿದೆ.

ಸಮಾಜದಲ್ಲಿ ಸಂಬಂಧಗಳು ಬೆಸೆಯಲು ಜಾತಿ, ಬೇದ, ವರ್ಗ, ವರ್ಣ, ಮೇಲು, ಕೀಳು ಇವು ಯಾವು ಸುಳಿಯುವುದಿಲ್ಲ. ಸಂಬಂಧ ಬೇಸೆಯಲು ನಿರ್ಮಲವಾದ ಮನಸ್ಸು, ಸಂಬಂಧ ಬೆಳೆಸಬೇಕೆಂಬುವವರ ಬಗ್ಗೆ ಆತ್ಮ ವಿಶ್ವಾಸವೊಂದಿದ್ದರೆ ಸಂಬಂಧಗಳು ಕುದುರುತ್ತವೆ. ಬೀಚನಹಳ್ಳಿಯವರ ಕಥೆಗಳು ಇಂತಹ ಕಾರ್ಯಮಾಡಿವೆ. "ಹಂದಿ ಲಕ್ಕವ್ವ" ಎಂಬ ಕಥೆಯಲ್ಲಿನ ಪಾತ್ರಗಳ ಮನಸ್ಸಿನಲ್ಲಿನ ಭಾವನೆಗಳು ಹಾಗೂ 'ಅವಮಾನ' ಕಥೆಗಳಲ್ಲಿನ ಪಾತ್ರಗಳ ಭಾವನೆಗಳು ಒಂದೇ ರೀತಿಯಾಗಿವೆ ಎಂದು ಹೇಳಲಾಗದಿದ್ದರೂ ಸಹ ಎರಡು ಕಥೆಯ ಪಾತ್ರ ವೈಶಿಷ್ಟ್ಯೆತೆಗಳು ಒಂದೇ ಆಗಿವೆ. ಎಂದು ಹೇಳಬಹುದು. 'ಅವಮಾನ' ಕಥೆಯಲ್ಲಿ ತನ್ನ ತಂದೆಯ ತಿಥಿಗೆ ಹೋತನ್ನು ಕೊಡಲಾರದ ಚಂದ್ರಪ್ಪ (ಕುಂಟಪ್ಪ) 'ಹಂದಿ ಲಕ್ಕವ್ವ' ಕಥೆಯಲ್ಲಿ ತನ್ನ ಗಂಡನ ಬಗ್ಗೆ ಆತ್ಮವಿಶ್ವಾಸ, ನಂಬಿಕೆಯನ್ನಿಟ್ಟುಕೊಳ್ಳದ 'ಗಂಗಮ್ಮ' ಗೌರಮ್ಮರ ಮನಸ್ಸಿನ ಭಾವನೆಗಳು ವಿಶಿಷ್ಟತೆಯಿಂದ ಕೂಡಿವೆ. ಇದು ಸಾಮಾಜಿಕವಾಗಿ ನಿಜವೂ ಹೌದು ಪ್ರತಿಯೊಬ್ಬರು ಸಹ ತಮ್ಮ ಕೊರಳಿಗೆ ಸಂಸಾರಬಿತ್ತೆಂದರೆ ಅಥವಾ ದೊಡ್ಡವರಾಗಿ ಯೋಚನಾ ಶಕ್ತಿ ಬೆಳೆಯಿತೆಂದರೆ ಒಬ್ಬರನ್ನೊಬ್ಬರು ದ್ವೇಷಿಸುವ, ತಿರಸ್ಕರಿಸುವ ಮನೋಭಾವ ಬೆಳೆಯುತ್ತದೆ.

ಸಂಬಂಧಗಳು ಬೇಸೆಯಲು ಜಾತಿಗಳು ಅಡ್ಡಿಯಾಗುವುದಿಲ್ಲ ಎಂಬುದನ್ನು ಈ ಹಿಂದೆಯೇ ತಿಳಿಸಲಾಗಿದೆ. ಕಾಡಣ್ಣ ಒಂದು ಜಾತಿಯವನಾದರೆ ಲಕ್ಕವ್ವ-ಕೊರಚ ಅಥವಾ ಕೊರಮ ಜನಾಂಗದವಳು ಇವರಿಬ್ಬರ ಮನಸ್ಸು ನಿರ್ಮಲವಾಗಿದ್ದಕ್ಕಾಗಿ ಆಕೆಯನ್ನು ಕರೆದುಕೊಂಡು ತಮ್ಮ ಮನೆಯಲ್ಲಿಟ್ಟುಕೊಳ್ಳುತ್ತಾನೆ ಅದನ್ನು ಅರ್ಥಮಾಡಿಕೊಳ್ಳದ ಸಮಾಜ ಅವರಿಬ್ಬರ ಬಗ್ಗೆ ಕಥೆ ಕಟ್ಟುತ್ತಾರೆ. ತಮ್ಮ ಮನೆಯ ಒಡತಿಯರು ಸಹ ಅನುಮಾನ ಪಡುತ್ತಾರೆ. ಒಂದು ವಿಚಿತ್ರವೆಂದರೆ ಲಕ್ಕವ್ವ ಮನೆಗೆ ಬಂದ ನಂತರ ಬೇರ್ಪಟ್ಟು ಹೋಗಿದ್ದ ಕಾಡಣ್ಣನ ಮೊದಲ ಸಂಸಾರ ಒಂದಾಗುತ್ತದೆ. ಸಹಜವಾಗಿ ಪತ್ನಿ ಇದ್ದಾಗಲೇ ಗಂಡ ಮತ್ತೊಬ್ಬಳನ್ನು ವಿವಾಹವಾಗುವುದು, ಮತ್ತೊಬ್ಬರ ಜೊತೆ ತಿರುಗಾಡುವುದು, ಮತ್ತೊಂದು ಮನೆಗೆ ಹೋಗುವುದು ಪತ್ನಿಗೆ ಕಂಡುಬಂದರೆ ಪತ್ನಿಗೆ ಸಹಿಸಲಾಗುವುದಿಲ್ಲ. ಕಾಡಣ್ಣ ಮಾಡಿಕೊಂಡು ಬಂದಂತಹ ಮತ್ತೊಬ್ಬಳನ್ನು ಕೂಡ ಮನೆಯಲ್ಲಿರಿಸಿದಾಗ ಸವತಿಯರು ಜಗಳವಾಡುವುದು ಸಂಸಾರದಲ್ಲಿ ಸಹಜವಾಗಿ ಬಿಟ್ಟಿದೆ. ಪ್ರಮುಖವಾಗಿ ಈ ಕಥೆಯಲ್ಲಿ ಜಾತಿ ಬೇದವೆನಿಸಿದೆ. ಮಾಡಿದ ಕಾರ್ಯ ಸಮಾಜವನ್ನು ತಿದ್ದವ ಕಾರ್ಯ ಮಾಡಿದೆ. ಹಾಗೂ ಮನುಷ್ಯ ಸಂಬಂಧಗಳನ್ನು ಬೆಳೆಸುವ ಉತ್ತಮ ಕೆಲಸವನ್ನು ಕಥೆಗಾರರು ಮಾಡಿದ್ದಾರೆ ಎಂದೆನಿಸುತ್ತದೆ.

ಒಟ್ಟಾರೆಯಾಗಿ ಬೀಚನಹಳ್ಳಿ ಅವರ ಎಲ್ಲಾ ಕಥೆಗಳನ್ನು ಓದುತ್ತಾ ಹೋದಂತೆ ಮನುಷ್ಯ ಸಂಬಂಧಗಳನ್ನು ಬೆಸೆಯುವ ಕಾರ್ಯ ಮಾಡಿದ್ದಾರೆ. ಪ್ರತಿಯೊಂದು ಕಥೆಯಲ್ಲಿಯೂ ಈ ಅಂಶವನ್ನು ಗುರುತಿಸಬಹುದು. ಮುಂದಿನ ಕಥೆಗಾರರು ಸಹ ಇದೆ ರೀತಿಯ ಕಥೆಗಳನ್ನು ಬರೆದಲ್ಲಿ ಸಮಾಜವನ್ನು ಜಾತಿ, ವರ್ಗ, ವರ್ಣಗಳೆಂಬ ಅಂಶಗಳಿಂದ ಮುಕ್ತಗೊಳಿಸಿ ಒಂದು ಹೊಸ ಸಮಾಜ ನಿರ್ಮಾಣ ಮಾಡಬಹುದು.

## ೩.೨. ಸಮುದಾಯ ಸಂಬಂಧಗಳ ಸ್ವರೂಪ:

ಗ್ರಾಮಗಳ ಜನರು ಜಾತಿ, ಧರ್ಮ, ವಿವಾಹ, ವ್ಯಕ್ತಿ ಮತ್ತು ಆಚರಣೆಗಳಲ್ಲಿ ಗಾಡವಾದ ಜಡ ಸಾಂಪ್ರದಾಯಿಕ ಭಾವನೆ ಹೋಂದಿದ್ದಾರೆ. ಈ ನೆಲೆಯಲ್ಲಿ ಅವರು ಅವುಗಳನ್ನು ಉಳಿಸಿಕೊಳ್ಳಲು ಯಾವ ಸಂಘರ್ಷಕ್ಕೂ ಸಿದ್ಧರಾಗಿರುತ್ತಾರೆ. ಗ್ರಾಮ ಸಮಾಜದ ಜನರ ಸಂಪ್ರದಾಯಗಳು, ಜೀವನದ ರೀತಿನೀತಿಗಳು, ನಂಬಿಕೆ ಮೌಲ್ಯಗಳು ಜಾತಿ ಆರ್ಥಿಕ ಭದ್ರತೆ ಆಧಾರಿತವಾಗಿದ್ದು ಜಾತಿಯಿಂದ-ಜಾತಿಗೆ ಭಿನ್ನವಾಗಿರುತ್ತವೆ. ಸಮಸ್ತ ಗ್ರಾಮೀಣ ಜನತೆಯು ಜಾತಿ, ವರ್ಗ ಆಧಾರದಲ್ಲಿ ಒಡೆಯಲ್ಪಟ್ಟ, ಒಂದು ಅವಿಚ್ಛನ ಘಟಕದಂತೆ ಕಾರ್ಯನಿರ್ವಹಿತ್ತಿದ್ದ ರೀತಿ, ನೀತಿಗಳು ಇಂದು ಕಂಡುಬರುವುದಿಲ್ಲ. ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಗಳಲ್ಲಿ ಜಾತಿ ಪಂಥಗಳ ಆಧಾರದಲ್ಲಿ ಪಾಲ್ಗೊಳ್ಳುವ ರೀತಿ ನೀತಿಯ ನಿರ್ಮಾಣ, ಪಾಲನೆ ಇತಿಹಾಸ ಕಾಲದಿಂದಲೂ ಗ್ರಾಮ ಸಮಾಜದಲ್ಲಿದೆ. ಜನರು ಪರಸ್ಪರ ಸುಖ, ದುಃಖಗಳಲ್ಲಿ ಪಾಲ್ಗೊಳ್ಳುವ ನೆಲೆಯಲ್ಲಿ ದಲಿತ, ಕೆಳ ವರ್ಗಗಳ ಶೋಷಣೆ ಕಂಡುಬರುತ್ತದೆ. ಇಂದು ಗ್ರಾಮಗಳಲ್ಲಿ ಆಗುತ್ತಿರುವ ಬದಲಾವಣೆಗಳು ಜಾತಿಯತೆಯ ಮನೋಭಾವ ತೀವ್ರತೆ, ರಾಜಕೀಯ ವ್ಯಕ್ತಿಗಳ ಪ್ರಭಾವ ಮೊದಲಾದವುಗಳಿಂದ ಗ್ರಾಮೀಣ ಜನರ ನೆರೆಹೊರೆಯ ನಿಕಟ ಜೀವನ ಮಾಯವಾಗಿ ದ್ವೇಷಾಸೂಯೆಯ ಹಾಗೂ ಸ್ಪರ್ಧಾತ್ಮಕ ಮನೋಭಾವ ಇನ್ನೂ ತೀವ್ರವಾಗಿ ಬೆಳೆದಿದೆ. ಹಾಗೆ ಬೆಳೆಯುತ್ತಿರುವ ಸಂಘರ್ಷದ ತೀವ್ರತೆಯನ್ನು ಕಿತ್ತು ಹಾಕುವ ಪ್ರಯತ್ನ ಬೀಚನಹಳ್ಳಿಯವರದಾಗಿದೆ.

ಡಾ. ಕರೀಗೌಡ ಬೀಚನಹಳ್ಳಿ ಅವರು ಸಮುದಾಯಗಳಲ್ಲಿ ಕಂಡು ಬರುವಂತಹ ಗ್ರಾಮಗಳ ಜನರು ಜಾತಿ, ಧರ್ಮ, ವಿವಾಹ, ವೃತ್ತಿ ಮತ್ತು ಆಚರಣೆಗಳನ್ನು ಗಮನದಲ್ಲಿಟ್ಟುಕೊಂಡು ಆಯಾ ಸಮುದಾಯಗಳ ಪಾತ್ರ ಚಿತ್ರಣದ ಸ್ವರೂಪ, ಆಚರಣೆಗಳ ಸ್ವರೂಪ, ವೃತ್ತಿಯ ಮೌಲ್ಯಿಕತೆಯನ್ನು ಜೊತೆಗೆ ವಿಧಿ ವಿಧಾನಗಳನ್ನು ಕತೆಗಳಲ್ಲಿ ಚಿತ್ರಿಸಲು ಪ್ರಯತ್ನಿಸಿದ್ದಾರೆ. 'ಒಂದು ಅಪೂರ್ವ ಸಂಸಾರ' ಕತೆಯಲ್ಲಿ ಒಂದು ಮುಸ್ಲಿಂ ಸಮುದಾಯ, ಮತ್ತೊಂದು ಹಿಂದೂ ಸಮುದಾಯ. ವಲಸಿಗ ಮುಸ್ಲಿಂ ಕುಟುಂಬವೊಂದು ನಿತ್ಯ ದುಡಿದರೂ ಹೊಟ್ಟೆ ತುಂಬಿಸಿಕೊಳ್ಳಲಾಗದೆ ಪರದಾಡುತ್ತಲೇ ಪಿತೃಪಕ್ಷದ ನಿಮಿತ್ತ ಹಬ್ಬಮಾಡಿ ಹೊಟ್ಟೆ ತುಂಬ ಉಣ್ಣಬೇಕೆಂಬ ಬಯಕೆ ಕೈಗೂಡದೆ ಹೋಗುತ್ತದೆ. ಅತ್ತ ನಿಂಗೇಗೌಡರ ಮನೆತನದತ್ತ ಗಮನಿಸಿದರೆ ಅವರು ಊರಿಗೆ ಶ್ರೀಮಂತ ಮಂದಿಯವರು. ಇವರು ಮನಸ್ಸು ಮಾಡಿದ್ದರೆ ಮುಸ್ಲಿಂ ಸಮುದಾಯಕ್ಕೆ ಒಂದು ಉತ್ತಮ ನೆಲೆಯನ್ನೊದಗಿಸಿ ಅವರ ಆಸೆಯನ್ನು ಈಡೇರಿಸಬಹುದಿತ್ತು. ಬೀಚನಹಳ್ಳಿಯವರು ಸಮಾಜಕ್ಕೆ ಅನುಗುಣವಾಗಿ ಕಥೆಯನ್ನು ರೂಪಿಸಿದ್ದಾರೆ. ಬೀಚನಹಳ್ಳಿ ಅವರ ಬಹುಮಟ್ಟಿಗೆ ಎಲ್ಲಾ ಕತೆಗಳಲ್ಲಿಯೂ ಸಮುದಾಯಗಳ ಸ್ವರೂಪವನ್ನು ಗುರುತಿಸಬಹುದು. ಆದರೆ ಕಥೆಗಳಲ್ಲಿ ಬರುವ ಕುಟುಂಬಗಳ ವೈಶಿಷ್ಟ್ಯತೆಯು ವಿಭಿನ್ನ ರೀತಿಯಿಂದ ಕೂಡಿದ್ದು, ವಿಭಿನ್ನ ಆಲೋಚನೆಗಳನ್ನು ಹೊಂದಿವೆ. 'ಸಂಗಾತಿಗಳು'

ಕತೆಗಲ್ಲಿಯೂ ಸಹ ಎರಡು ಗುಂಪುಗಳನ್ನು ಗುರುತಿಸಬಹುದು. ಆಸ್ತಿ, ಪಾಳ್ಯಾದ ಚೆನ್ನಯ್ಯ-ಹೆಂಡತಿ ನಂಜವ್ವ, ಮಕ್ಕಳು ರಾಜಣ್ಣ, ತಿಮ್ಮೇಗೌಡ, ಜವರ, ಚಂದ್ರಪ್ಪ, ಭಾಗ್ಯ ಇವರು ಒಂದು ಗುಂಪಿನ ಸಮುದಾಯವಾದರೆ, ಇತ್ತ 'ಅಬ್ದುಲ್, ಅಜೀಜ್‌ಸಾಬ್' ಪತ್ನಿ ಫಾತಿಮಾ, ಮಗಳು 'ಜಮೀಲ' ಮತ್ತೊಂದು ಮುಸ್ಲಿಂ ಸಮುದಾಯವಿದೆ. ಈ ಎರಡು ಸಮುದಾಯ ಅಥವಾ ಜನಾಂಗದ ನಡುವೆ ಸಾಮರಸ್ಯವನ್ನು ತಂದು ಒಡ್ಡಿದ್ದಾರೆ ಬೀಚನಹಳ್ಳಿಯವರು. ಅಂದರೆ ಹಿಂದೂ, ಮುಸ್ಲಿಂ ಸಮುದಾಯಗಳು ಶಿಕ್ಷಣದಿಂದ ಸಾಮರಸ್ಯವಾಗುತ್ತವೆ. 'ಚೆನ್ನಯ್ಯನನ್ನು ಕಾಡುತ್ತಿರುವ ಬಡತನ ಆತನ ಮಗನನ್ನು ಓದಿಸಲಾಗದಂತೆ ಮಾಡುತ್ತದೆ. ಆದರೆ ಬೀಚನಹಳ್ಳಿಯವರು ಶಿಕ್ಷಣಕ್ಕೆ ಮುನ್ನುಡಿಯನಲ್ಲಿದ್ದಾರೆ.

'ಅವಶೇಷ' ಕಥೆಯಲ್ಲಿ ಕಂಡು ಬರುವಂತೆ ಒಂದೇ ಸಮುದಾಯದಡಿಯಲ್ಲಿ ಬದುಕುತ್ತಿರುವ ಜನಾಂಗವು ಒಂದು ಅವಶೇಷದಿಂದ ತನ್ನ ಜಾತಿ, ಜನಾಂಗವನ್ನು ಪರಿಚಯಿಸಿದ್ದಾರೆ. ಬೀಚನಹಳ್ಳಿಯವರು 'ಅವಶೇಷ' ಕತೆಯ ಮೂಲಕ 'ಶೈವ', 'ವೃಧಿಕ', 'ಬೌದ್ಧ' ಧರ್ಮಗಳನ್ನು ಪರಿಚಯಿಸುವುದರ ಮೂಲಕ, ಧರ್ಮಗಳು ಆರಾಧಿಸುವಂತಹ ದೇವರುಗಳಾವುವು ಎಂಬುದನ್ನು ಸಹ ಇಲ್ಲಿ ಚಿತ್ರಿಸಿಕೊಟ್ಟಿದ್ದಾರೆ. 'ಉಗುಳು' ಕಥೆಯಲ್ಲಿ ಕಂಡುಬರುವ ಎರಡು ಗುಂಪುಗಳು ಬೇರೆ ಬೇರೆ ಜನಾಂಗದವರು. ಹೊಲೆಯರು, ಗೌಡ ಮನೆತನದವರು. ಹೊಲೆಯರಿಂದ ಮೇಲುವರ್ಗದವರಿಗೆ ಮುಕ್ತಿ ಸಿಗುತ್ತದೆ ಎಂಬುದು ಎಷ್ಟರ ಮಟ್ಟಿಗಿನ ನ್ಯಾಯ? ಎಂಬುದು ಪ್ರಶ್ನೆಯು ಉದ್ಭವವಾಗುತ್ತದೆ. ಕೆಳವರ್ಗದವರ ಪೂಜೆಯಿಂದ ಮೇಲುವರ್ಗದವರಿಗೆ ಮುಕ್ತಿ ದೊರಕುತ್ತದೆ ಎಂಬ ವಿಶಿಷ್ಟ ಸಂಗತಿಯನ್ನು ಈ ಕತೆಯಿಂದ ತಿಳಿದುಬಹುದು. ಒಟ್ಟಾರೆಯಾಗಿ ಬೀಚನಹಳ್ಳಿಯವರು ತಮ್ಮ ಕತೆಗಳ ವಿವಿಧ ರೀತಿಯ ಸಮುದಾಯಗಳನ್ನು ಹೆಸರಿಸಿದ್ದಲ್ಲದೇ ಅವುಗಳ ವಿಶೇಷತೆಯನ್ನು ತಿಳಿಸಿದ್ದಾರೆ. ಹಾಗೆಯೇ ಆಯಾ ಸಮುದಾಯಗಳ ವೈಶಿಷ್ಟ್ಯತೆಗಳನ್ನು ಗುರುತಿಸಲು ಪ್ರಯತ್ನಿಸಿದ್ದಾರೆ.

## ೩.೩. ಕುಟುಂಬ ಸಂಬಂಧಗಳ ಸ್ವರೂಪ:

ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬವು ಅತ್ಯಂತ ಚಿಕ್ಕ ಸಂಸ್ಥೆಯಾದರೂ ಅಷ್ಟೇ ಪ್ರಾಮುಖ್ಯತೆಯನ್ನು ಹೊಂದಿದೆ. ಹಿರಿಯ ತಲೆಮಾರಿನ ರಕ್ತ ಸಂಬಂಧಗಳು (ಅಂದರೆ ಅಜ್ಜ-ಅಜ್ಜಿ, ತಂದೆ-ತಾಯಿ, ಅಣ್ಣ-ತಮ್ಮ, ತಂಗಿ-ಅಕ್ಕ ಮುಂತಾದವರು) ಒಂದೇ ಸೂರಿನಡಿ ವಾಸಿಸುವ ಅವಿಭಕ್ತ ಕುಟುಂಬಗಳು ತಮ್ಮದೇ ಆದ ಕೌಟುಂಬಿಕ ನಿಬಂಧನೆಗಳೊಂದಿಗೆ ಬಂಧಿಸಲ್ಪಟ್ಟಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ತಂದೆ ಮನೆಯ ಯಜಮಾನನಾಗಿದ್ದರೆ ತಾಯಿ ಕುಟುಂಬವನ್ನು ಓಲೈಸುವ ಯಜಮಾನತಿಯಾಗಿರುತ್ತಾಳೆ. ಕರಾವಳಿಯ ಹಲವು ಗ್ರಾಮಗಳಲ್ಲಿ, ಪರಿಶಿಷ್ಟ ಪಂಗಡಗಳಲ್ಲಿ ಮಾತೃಪ್ರಧಾನ ಕುಟುಂಬಗಳು ಕಂಡುಬರುತ್ತವೆ. ಕುಟುಂಬಕ್ಕೆ ಸಂಬಂಧಪಟ್ಟ ಆರ್ಥಿಕ, ಧಾರ್ಮಿಕ, ಸಾಮಾಜಿಕ ನಿರ್ಧಾರಗಳನ್ನು ಕುಟುಂಬದ

ಸದಸ್ಯರೆಲ್ಲ ಕಲೆತು ತೆಗೆದುಕೊಳ್ಳುವ ಅಲಿಖಿತ ನಿಯಮಗಳು ಕುಟುಂಬದಲ್ಲಿವೆ. ಇಂದಿಗೂ ಗ್ರಾಮಗಳಲ್ಲಿ ಅವಿಭಕ್ತ ಕುಟುಂಬ ಪದ್ಧತಿಯೇ ಹೆಚ್ಚಾಗಿ ರೂಢಿಯಲ್ಲಿದೆ. ಆದರೆ ಬಡತನ, ನಿರುದ್ಯೋಗ ಮೊದಲಾದವುಗಳಿಂದಾಗಿ ಗ್ರಾಮೀಣ ಜನರು ನಗರಗಳತ್ತ ವಲಸೆ ಹೋಗಲು ಇಷ್ಟಪಡುತ್ತಾರೆ.

ಗ್ರಾಮೀಣ ಸಮಾಜದಲ್ಲಿ ವ್ಯಕ್ತಿಯೊಬ್ಬನ ಸಾಮಾಜಿಕ ವರ್ತನಾಂಶಗಳನ್ನು ಪ್ರಾಥಮಿಕ ಸಂಸ್ಥೆಗಳು ಅಂದರೆ ಕುಟುಂಬ, ನೆರೆಹೊರೆ, ಜಾತಿ, ಪಂಥ ಮೊದಲಾದವು ಪ್ರಭಾವಿಸುತ್ತವೆ. ವ್ಯಕ್ತಿಯ ಜನನದಿಂದ ಹಿಡಿದು ಬಾಲ್ಯ, ವಿದ್ಯಾಭ್ಯಾಸ, ವಸ್ತ್ರ, ಸಂಹಿತೆ, ವೃತ್ತಿ, ಮದುವೆ ಮುಂತಾದ ಶವಸಂಸ್ಕಾರದವರೆಗಿನ ಅವನ ನಡತೆ ಮತ್ತು ಆಚರಣೆಗಳು ಕುಟುಂಬ ಮತ್ತು ಜಾತಿ ಸಂಸ್ಥೆಗಳಿಂದ ನಿಯಂತ್ರಿಸಲ್ಪಡುತ್ತದೆ. ಮೇಲ್ಜಾತಿ ಅಥವಾ ಸವರ್ಣಿಯ ವ್ಯಕ್ತಿಯ ಕೌಟುಂಬಿಕ ಸಂಬಂಧಗಳಲ್ಲಿ ಭಿನ್ನವಾದ ಹಿಡಿತ ಕಂಡುಬರುತ್ತದೆ. ವ್ಯಕ್ತಿ ಮತ್ತು ಕುಟುಂಬದ ಸಂಬಂಧ ಮೂಲಭೂತವಾಗಿ ದೈಹಿಕ ಮತ್ತು ಭಾವನಾತ್ಮಕ ಸಂಬಂಧವಾಗಿದ್ದರೂ ಅದನ್ನು ಹಿಡಿತದಲ್ಲಿ ಇಟ್ಟುಕೊಳ್ಳುವುದು ಅವರಿಬ್ಬರ ನಡುವಿನ ಆರ್ಥಿಕ ಸಂಬಂಧವಾಗಿದೆ. ಕುಟುಂಬದ ಸದಸ್ಯರೆಲ್ಲರ ದುಡಿಮೆಯನ್ನು ಸಮನಾಗಿ ಹಂಚಿ ಉಪಯೋಗಿಸುವ ಶ್ರಮ ವಿಭಜಕ ಆರ್ಥಿಕ ನೀತಿ ಕುಟುಂಬದಲ್ಲಿದೆ. ಈ ಎಲ್ಲಾ ಅಂಶಗಳನ್ನಿಟ್ಟುಕೊಂಡು ಕರೀಗೌಡ ಬೀಚನಹಳ್ಳಿ ಅವರ ಕತೆಗಳಲ್ಲಿ ಗ್ರಾಮೀಣ ಜನತೆಯ ಸ್ವರೂಪ ಕುಟುಂಬಗಳ ಸ್ವರೂಪವನ್ನು ಕೆಲವು ಕತೆಗಳ ನಿದರ್ಶನದೊಂದಿಗೆ ವಿವರಿಸಬಹುದು.

ಬೀಚನಹಳ್ಳಿ ಅವರ ಎಲ್ಲಾ ಕತೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಪ್ರತಿಯೊಂದು ಕತೆಯಲ್ಲಿಯೂ ಕುಟುಂಬ, ಕುಟುಂಬದ ಸದಸ್ಯರ ಅದರ ಸ್ವರೂಪವನ್ನು ಸೂಕ್ಷ್ಮವಾಗಿ ಗಮನಿಸಿ ಗುರುತಿಸಬಹುದು. 'ಒಂದು ಅಪೂರ್ವ ಸಂಸಾರ', 'ಆಸಕ್ತಿ', 'ನೆನಪಲ್ಲ ವಾಸ್ತವ', 'ದನಿ', 'ಅವಮಾನ', 'ಕಲ್ಯಾಣಿ', 'ಗೌರಿ', 'ಕಡಲ ಮಂತು', 'ಹಂದಿ ಲಕ್ಕವ್ವ' ಹೀಗೆ ಹತ್ತು ಹಲವು ಕಥೆಗಳಲ್ಲಿ ಕುಟುಂಬಾಂಶಗಳನ್ನು ಗುರುತಿಸಬಹುದು.

'ಒಂದು ಅಪೂರ್ವ ಸಂಸಾರ'ದಲ್ಲಿ ವಲಸಿಗ ಮುಸ್ಲಿಂ ಕುಟುಂಬವೊಂದು ನಿತ್ಯ ದುಡಿದರೂ ಹೊಟ್ಟೆ ತುಂಬಿಸಿಕೊಳ್ಳಲಾಗದೆ ಪರದಾಡುತ್ತಲೇ 'ಪಿತೃಪಕ್ಷ'ದ ನಿಮಿತ್ತ ಹಬ್ಬಮಾಡಿ, ಹೊಟ್ಟೆ ತುಂಬ ಉಣ್ಣಬೇಕೆಂಬ ಬಯಕೆ ಕೈಗೂಡದೆ ಹೋಗುತ್ತದೆ. ಸಾಬುಲಾಲು ಹಬ್ಬದ ಸಲುವಾಗಿ ಒಂದಿಷ್ಟು ಸಂಪಾದಿಸಿಕೊಂಡು ಬರಲು ದಿನವಿಡಿ ಹೆಣಗಿದರೂ ಸಾಧ್ಯವಾಗುವುದಿಲ್ಲ. ಮಕ್ಕಳಾದ ಅತ್ತರ್, ಅಜೀಮ್ ದುಡಿದ ಫಲ ಪಡೆಯಲೂ ವಿಫಲಾಗುತ್ತಾರೆ. ತಾಯಿ ಮುಮ್ತಾಜ್ ಬೂಬಮ್ಮ ಹಬ್ಬಕ್ಕೆ ಅಡಿಗೆ ಮಾಡಲು ಎಷ್ಟು ಹೆಣಗಿದರೂ ಸಾಧ್ಯವಾಗದೆ ಎಲ್ಲರ ಮೇಲೆ ಕೋಪಿಸಿ ಕೋಲ್ಲುವುದೊಂದೇ ಆಗುತ್ತದೆ. ತಾಯಿಯ ಕೋಪಕ್ಕೆ ಬೇಸತ್ತ ಮಗಳು ಗುಡಿಸಲಿನಿಂದ ಹೊರ ಹೋಗುತ್ತಾಳೆ. ಇದರಿಂದ ಸಂಸಾರ, ಕುಟುಂಬದಲ್ಲಿ ಎದ್ದು ಕಾಣುವ ಕಡು ಬಡತನವು ಪ್ರಕಾಶಿಸುತ್ತದೆ. ಬಡತನ ಎನ್ನುವಂತದ್ದು ಕುಟುಂಬದ

ಸಂದರ್ಭದಲ್ಲಿ ಮನುಷ್ಯ ನಿರಾಸಕ್ತನಾಗುವುದು ಸಹಜ.

ಬೀಚನಹಳ್ಳಿ ಅವರು ಸಮಾಜವನ್ನು, ಕುಟುಂಬವನ್ನು ತಿರುಚುವ ಕೆಲಸ ಮಾಡಿದ್ದಾರೆ. ಅಂದರೆ ತಾವು ಬರೆದ 'ಆಸಕ್ತಿ' ಕತೆಯು ಪ್ರಮುಖವಾಗಿ 'ಸಂಘರ್ಷದಿಂದ ಸಾಮರಸ್ಯದೆಡೆಗೆ' ಎಂಬ ವಾಕ್ಯಕ್ಕೂ ಬದ್ಧವಾಗಿದೆ. ಎರಡು ಒಡೆದ ಕುಟುಂಬಗಳನ್ನು ಒಂದು ಮಾಡುವ ಉದ್ದೇಶ 'ಗಂಗಣ್ಣ'ನದು ಅದಕ್ಕೆ ಕಾರಣವೂ ಆತನೇ ಆಗಿದ್ದರೂ ಒಡೆದ ಮನಸ್ಸುಗಳನ್ನು ಒಡೆದ ಕುಟುಂಬವನ್ನು ಒಂದು ಮಾಡುವ ಆಸೆಯನ್ನಿಟ್ಟುಕೊಂಡಿರುವುದು ಒಂದು ವಿಶಿಷ್ಟವಾದ ಸಂಗತಿಯಾಗಿದೆ. ಕುಟುಂಬ ಎಂದ ಮೇಲೆ ಒಳಜಗಳಾಗುವುದು ಸಹಜ ಅದರಿಂದ ದೂರವಾಗುವ ಮನಸ್ಸುಗಳನ್ನು ಒಂದು ಮಾಡುವ ಜವಾಬ್ದಾರಿಯನ್ನು 'ಗಂಗಣ್ಣ'ನು ತನ್ನ ಮಗನಿಗೆ ಒಪ್ಪಿಸುತ್ತಾನೆ. ಬೀಚನಹಳ್ಳಿಯವರು ಸಮಾಜದ ತಿರುವಿಗೆ ವಿದ್ಯಾವಂತ ಮಗನ ಪಾತ್ರವನ್ನು ಸೃಷ್ಟಿಸುವುದರ ಮೂಲಕ ಸಮಸ್ಯೆಗೆ ಪರಿಹಾರ ಕಂಡುಕೊಂಡು ಸಾಮರಸ್ಯವನ್ನು ಬೆಸೆಯುವತ್ತ ತಮ್ಮ ಗಮನ ಹರಿಸಿದ್ದಾರೆ.

ಕುಟುಂಬದ ಯಜಮಾನ ಗಿರಿಯನ್ನು ತಂದೆ ವಹಿಸಿಕೊಂಡಿರುತ್ತಾನೆ. ಎಂದು ಈಗಾಗಲೇ ಪೀಠಿಕಾ ಭಾಗದಲ್ಲಿ ತಿಳಿಸಿದ್ದೇನೆ. 'ದನಿ' ಕತೆಯಲ್ಲಿ ತನ್ನ ಕುಟುಂಬದ ಹೊಣೆಗಾರಿಕೆಯನ್ನು ಸಂಪೂರ್ಣವಾಗಿ ತಾಯಿಯೇ ವಹಿಸಿಕೊಂಡಿರುತ್ತಾಳೆ. ಇದನ್ನು ನಾವು ಮಾತೃಪ್ರಧಾನ ಕುಟುಂಬಕ್ಕೆ ಸೇರಿಸಬಹುದು. 'ದನಿ' ಕತೆಯಲ್ಲಿ ಬರುವ 'ಗಂಗವ್ವ' ತನ್ನ ಕುಟುಂಬ ಬಾರವನ್ನೆಲ್ಲಾ ತಾನೇ ಹೊತ್ತುಕೊಂಡು ಜೀವನ ಸಾಗಿಸುತ್ತಾಳೆ. 'ಗಂಗವ್ವ'ನಿಗೆ ಗಂಡನಿದ್ದರೂ ಸಹ ಇಲ್ಲದ ಹಾಗೆ. ಮಕ್ಕಳಾದ ನಾಗಿ, ಗೌರಿ, ರಾಜಿ ಮೂವರು ಮಕ್ಕಳಿಗೆ ತನ್ನ ಅವ್ವನೇ ತಂದೆ-ತಾಯಿ. ಬೀಚನಹಳ್ಳಿ ಅವರು ಇದರಿಂದ ಸಮಾಜದಲ್ಲಿರುವ, ಅದರಲ್ಲಿಯೂ ವಿಧವೆಯರು, ಗಂಡನಿದ್ದೂ ನೋಡದ ಕುಟುಂಬದವರನ್ನು ಬಡಿದೆಬ್ಬಿಸುವ ಕೆಲಸ ಮಾಡಿದ್ದಾರೆ. 'ಗಂಗವ್ವ'ನ ವ್ಯಕ್ತಿತ್ವ ಆಕೆಯ ದಿಟ್ಟ ಹೋರಾಟ ಹೊಸದನ್ನು ಬಯಸುವ ತವಕ ಆಕೆಯನ್ನು ಒಬ್ಬ ಉತ್ತಮ ನಾಗರಿಕ ಸಮಾಜದ ವ್ಯಕ್ತಿಯೊಂದಿಗೆ ಹೋಲಿಸಿದರೆ ತಪ್ಪಾಗಲಾರದು.

'ಅವಮಾನ' ಕಥೆಯಲ್ಲಿಯೂ 'ತಿಂಗಳ ತಿಥಿ' ಮಾಡಲು ಕುಟುಂಬವೊಂದು ಎಲ್ಲ ಸಿದ್ಧತೆಗಳನ್ನು ಮಾಡಿಕೊಳ್ಳಲು ಯತ್ನಿಸುವುದರಲ್ಲಿರುತ್ತದೆ. ಒಂದು ಕುಟುಂಬದಲ್ಲಿ ಒಂದು ಶುಭ ಕಾರ್ಯ ನಡೆಯಬೇಕೆಂದರೆ ಅದಕ್ಕೆ ಕುಟುಂಬದ ಸದಸ್ಯರೆಲ್ಲರ ಒಪ್ಪಿಗೆಯ ಮೇರೆಗೆ ನಡೆಯಬೇಕಾಗುತ್ತದೆ. ಆದರೆ 'ಅವಮಾನ' ಕತೆಯಲ್ಲಿ ಒಂದೇ ಕುಟುಂಬದಲ್ಲಿರುವ ಅಣ್ಣ-ತಮ್ಮಂದಿರ ಜಗಳ ಪೊಲೀಸ್ ಕಚೇರಿ ತಲುಪುತ್ತದೆ. ಕುಟುಂಬದ ಸದಸ್ಯರಲ್ಲಿರುವ ಮನಸ್ಸಿನ ವಿಭಿನ್ನ ರೀತಿಯ ಭಾವನೆಗಳನ್ನು ತೋರಿಸಿಕೊಡುತ್ತದೆ. ಅವಿಭಕ್ತ ಕುಟುಂಬದಲ್ಲಿ ಇಂತಹ ಕಲಹಗಳು ಸಹಜವೆಂದೆನಿಸಿದರೂ ಸಹ ಬೀಚನಹಳ್ಳಿ ಅವರು ಕುಟುಂಬದಲ್ಲಿ ಒಂದು 'ಮರಿ'ಯಿಂದ ಎಷ್ಟು ದೊಡ್ಡ ಸಮಸ್ಯೆಗೆ ಕಾರಣವಾಗುತ್ತದೆ ಹಾಗೂ ಅದರ ಪರಿಣಾಮಗಳೇನು? ಎಂಬುದನ್ನು ಕಥೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

'ಕೋಳಿಪಾಲು' ಕತೆಯು ಸಹ 'ಅವಮಾನ' ಕತೆಯೆಂತೆಯೇ ಸಮಸ್ಯೆಯ ಸುಳಿಯಲ್ಲಿ ಸಿಲಿಕಿಕೊಂಡು ಕೊನೆಯಲ್ಲಿ ಪರಿಹಾರವನ್ನು ಕಂಡುಕೊಂಡಿದೆ. ಒಂದು ಚಿಕ್ಕ ಕುಟುಂಬವು 'ಕೋಳಿ'ಯನ್ನು 'ಸರಿಪರಿಲಿ'ಗೆ ತೆಗೆದುಕೊಂಡು ಜೀವಿಸುವ ಪರಿಯನ್ನು ಈ ಕತೆಯು ಬಿಂಬಿಸುತ್ತದೆ. ಕುಟುಂಬವು ಕೋಳಿಯಿಂದ ಸಮಸ್ಯೆಗೆ ಈಡಾದಾಗ ಅದನ್ನು ಬೀಚನಹಳ್ಳಿ ಅವರು 'ಕರಡಯ್ಯ'ನಿಂದ ಸತ್ಯ ಹೇಳಿಸುವುದರ ಮುಖಾಂತರ ಕಥೆಯನ್ನು ಮುಗಿಸುತ್ತಾರೆ. ಅಂದರೆ ಸಮಾಜದಲ್ಲಿ ಸತ್ಯ, ಅಸತ್ಯತೆಯಿಂದ ಆಗುವ ಪರಿಣಾಮಗಳು ಎಂತವು ಎಂಬುದನ್ನು ತಿಳಿಸಿ ಕೊಟ್ಟಿದ್ದಲ್ಲದೆ, ಸಮಾಜಕ್ಕೆ ಮನವರಿಕೆ ಮಾಡಿಕೊಟ್ಟಿದ್ದಾರೆ.

ಕುಟುಂಬದ ಜೀವನ ಕೆಲವು ಸಂದರ್ಭದಲ್ಲಿ ದಿಗ್ಭಂಧನಕ್ಕೆ ಒಳಪಡಿಸಿರುತ್ತಾರೆ. ಏಕೆಂದರೆ ಕುಟುಂಬದಲ್ಲಿ ಯಾವುದೇ ಅಹಿತಕರವಾದ ಘಟನೆಗಳು ಸಂಬವಿಸಬಹುದು ಎಂಬ ಕಾರಣಕ್ಕಾಗಿ ದಿಗ್ಭಂಧನಕ್ಕೆ ಒಳಪಡಿಸಿರುತ್ತಾರೆ. 'ಗೌರಿ' ಕತೆಯಲ್ಲಿ ಬೊಂಡದ ಗುಂಡಮ್ಮ ತನ್ನ ಮೊಮ್ಮಕ್ಕಳನ್ನು ಸರಿಯಾಗಿ ತಮ್ಮ ಹಿಡಿತದಲ್ಲಿಟ್ಟುಕೊಳ್ಳದಿದ್ದರಿಂದ ಮೊಮ್ಮಗಳಾದ ಗೌರಿಯು ಮುಸ್ಲಿಂ ಜನಾಂಗದವನಾದ ಮಹಮದ್‌ನ ಜೊತೆ ಓಡಿ ಹೋಗುತ್ತಾಳೆ. ಇದನ್ನು ಸಂಕುಚಿತ ಅರ್ಥದಲ್ಲಿ ಅರ್ಥೈಸಿಕೊಳ್ಳುವುದಾದರೆ ತಾನು ಹುಟ್ಟಿ ಬೆಳೆದ ಸಮಾಜ, ಜನಾಂಗವನ್ನು ತ್ಯಾಜಿಸಿದವಳು ಅರ್ಥಾಥ್ ನೀತಿಕೆಟ್ಟವಳು ಎಂದು ಭಾವಿಸಿ ಆಕೆಯನ್ನು ಜನಾಂಗದಿಂದ ಹೊರಹಾಕುತ್ತಾರೆ. ಇದನ್ನೆ ವಿಶಾಲಾರ್ಥದಲ್ಲಿ ಅರ್ಥೈಸಿಕೊಂಡರೆ ತುಂಬ ಉತ್ತಮ ಎಂದೆನಿಸುತ್ತದೆ. "ಮಾನವ ಜಾತಿ ತಾನೊಂದೇ ಕುಲಂ" ಎನ್ನುವ ಹಾಗೆ ಜಾತಿ, ಧರ್ಮ, ಪಂಗಡ ಬೇರೆ ಬೇರೆಯಲ್ಲ ಎಲ್ಲ ಒಂದೇ ಎಂದು ತಿಳಿದುಕೊಂಡು ಸರ್ವಧರ್ಮ ಸಮಾನತೆಯನ್ನು ಸಾರುವ ನಿಟ್ಟಿನಲ್ಲಿ ಕತೆಯನ್ನು ಚಿತ್ರಿಸಿದ್ದಾರೆ.

'ಕಲ್ಯಾಣಿ' ಕತೆಯು ಸಮಾಜದ ವಾಸ್ತವಿಕ ಸಂದರ್ಭದಲ್ಲಿ ನಡೆಯುವ, ನಡೆಯುತ್ತಿರುವ, ನಡೆಯಬಹುದಾದ ಕತೆಯಾಗಿದೆ. ಬೀಚನಹಳ್ಳಿ ಅವರ ಕೆಲವು ವಿಶಿಷ್ಟ ಕತೆಗಳಲ್ಲಿ ಕಲ್ಯಾಣಿ ಕತೆಯು ಒಂದಾಗಿದೆ. ಕುಟುಂಬದ ಕೇಂದ್ರಬಿಂದು ಹೆಣ್ಣು. 'ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿ' ಎನ್ನುವ ಹಾಗೆ ಹೆಣ್ಣಿಗೆ ತಾಳ್ಮೆಯ ಶಕ್ತಿಯಿದೆ ಎಂಬುದನ್ನು 'ಬೀಚನಹಳ್ಳಿ' ಅವರು 'ಕಲ್ಯಾಣಿ ಕತೆಯಿಂದ ಗುರುತಿಸಿದ್ದಾರೆ. ಕುಡುಕ ಗಂಡನ ಕಟ್ಟಿಕೊಂಡು ಸಂಸಾರದ ಬಾರವನ್ನೆಲ್ಲಾ ತಾನೇ ಹೊತ್ತುಕೊಂಡು ಸಮಾಜದಲ್ಲಿ ತಾನೊಬ್ಬ ಪ್ರಮಾಣಿಕ ಮಹಿಳೆಯೆಂಬುದನ್ನೇ ಗುರುತಿಸಬಹುದು. ಜೊತೆಗೆ ಬೆರೊಬ್ಬರೊಂದಿಗೆ ಸಹಕಾರ ಪಡೆಯದೇ ಬಂದ ಕಷ್ಟಗಳನ್ನು ದಿಟ್ಟತನದಿಂದ ಎದುರಿಸಿದ್ದಾಳೆ. ಸಮಾಜಕ್ಕೆ ಮಾದರಿ ಹೆಣ್ಣಾಗಿ 'ಕಲ್ಯಾಣಿ' ಬದುಕಿದ್ದಾಳೆ.

'ಹಂದಿ ಲಕ್ಕವ್ವ' ಕತೆಯು ಕುಟುಂಬದಲ್ಲಿರುವ ಸದಸ್ಯರ ಮನೋಬಾವಗಳನ್ನು ಚಿತ್ರಿಸುವ ಕತೆಯಾಗಿದೆ. 'ಪರೋಪಕಾರ ಪರಧರ್ಮ ಸಹಿಷ್ಣುತೆ' ಮನುಷ್ಯ ಜೀವನದ ಉತ್ತಮ ಸಹಾಯಾಂಶಗಳು ಕಾಡಣ್ಣ ಬೇರೆ ಜನಾಂಗದವರನ್ನು ತಮ್ಮ ಮನೆಗೆ ಕರೆದುಕೊಂಡು ಬಂದಾಗ 'ಗಂಗಮ್ಮ, ಗೌರಮ್ಮ'ರ ಪರದಾಟ ಹೇಳತೀರದು. ಕಾಡಣ್ಣ ಹಂದಿ ಲಕ್ಕವ್ವನ

ಜನಾಂಗವನ್ನು ನೋಡಲಿಲ್ಲ, ಬದಲಾಗಿ ಆಕೆಯ ಸ್ಥಿತಿಯನ್ನು ಕಂಡು ಆಕೆಗೆ ಒಂದು ನೆಲೆಯನ್ನು ರೂಪಿಸಿಕೊಡಬೇಕೆಂಬ ಉದ್ದೇಶವಿರುತ್ತದೇ ವಿನಹ 'ಗಂಗಮ್ಮ, ಗೌರಮ್ಮ' ತಿಳಿದು ಕೊಂಡ ಹಾಗೆ ಅವರಿಬ್ಬರ ನಡುವೆ ಯಾವುದೇ ಅನೈತಿಕ ಸಂಬಂಧವಿರುವುದಿಲ್ಲ. ಇದು ಪ್ರಮುಖವಾಗಿ ಸಮಾಜದ ಜನತೆಯು ತಪ್ಪಾಗಿ ಕಾಣುವುದನ್ನು ಬಿಡಬೇಕು ಎಂಬುದು ಬೀಚನಹಳ್ಳಿಯವರ ಪ್ರಮುಖ ಉದ್ದೇಶವಾಗಿತ್ತು.

### ೩.೪. ದಾಂಪತ್ಯ ಹಾಗೂ ವಿಷಮ ದಾಂಪತ್ಯದ ಸ್ವರೂಪ:

ಕುಟುಂಬದ ಕೇಂದ್ರಬಿಂದುಗಳು (ದಂಪತಿಗಳು) ಗಂಡ-ಹೆಂಡತಿ. ಇವರಿಬ್ಬರ ಒಮ್ಮತ ಮನಸ್ಸಿನಿಂದ ಸಂಸಾರ ಸಾಗುತ್ತಿರುತ್ತದೆ. ಗಂಡನೇ ಮನೆಯ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡಿರುತ್ತಾನೆ. ಹೆಂಡತಿಯು ಸಹ ತನ್ನ ಪತಿದೇವನಿಗೆ ಆಗಾಗ ಸಲಹೆ-ಸೂಚನೆಗಳನ್ನು ಕೊಡುತ್ತಿರುತ್ತಾಳೆ. ಪತ್ನಿಯ ಸಲಹೆ-ಸೂಚನೆಗಳಂತೆ ನಡೆದುಕೊಳ್ಳಲಿಲ್ಲವೆಂದರೆ ಪತ್ನಿಗೆ-ಪತಿಯ ಮೇಲೆ ಸಂಶಯ ಉಂಟಾಗುತ್ತದೆ. ಪತಿಯಾದವನು ಮನೆಯ ಹಾಗೂ ಹೆಂಡತಿ, ಮಕ್ಕಳ ಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡಿದ್ದು ಅವರಿಗೆ ಸಕಾಲಕ್ಕೆ ಸರಿಯಾಗಿ ಅವರಿಗೆ ಬೇಕಾದದ್ದನ್ನು ಕಲ್ಪಿಸಿಕೊಡುವುದು ಪತಿಯ ಅಥವಾ ಮನೆಯ ಯಜಮಾನನ ಆದ್ಯ ಕರ್ತವ್ಯವಾಗಿರುತ್ತದೆ. ಕುಟುಂಬ ಎಂದಾಕ್ಷಣ ಒಳಜಗಳಗಳು ಸಹಜ. ಎಲ್ಲವನ್ನು ನಿರ್ವಹಿಸಿಕೊಂಡು, ಸಹಿಸಿಕೊಂಡು ಹೋಗಬೇಕು. ದಾಂಪತ್ಯದ ಬದುಕಿನಲ್ಲಿ ಸಮರಸವಿರುತ್ತದೆ. ಆದರೆ ಒಂದೊಂದು ಬಾರಿ ಸಂಶಯದಿಂದ ತಪ್ಪು ಅರ್ಥ ಕಲ್ಪಿಸಿಕೊಂಡು ಸಾಮರಸ್ಯವು ಸಂಘರ್ಷಕ್ಕೆ ಈಡು ಮಾಡಿಕೊಡುತ್ತದೆ.

ಡಾ. ಕರೀಗೌಡ ಬೀಚನಹಳ್ಳಿ ಅವರು ಬರೆದಿರುವ ಕತೆಗಳನ್ನು ಗಮನಿಸಿದರೆ ಕೆಲವು ಕತೆಗಳಲ್ಲಿ ಬರುವ ಪಾತ್ರಗಳು ಸಾಮರಸ್ಯದ ಜೀವನ ನಡೆಸುತ್ತವೆ. ಕೆಲವು ಪಾತ್ರಗಳು ಸಮಾಜದಲ್ಲಿ ಬರುವ ಸ್ತುತಿ ನಿಂದಣೆಗಳಿಗೆ ಒಳಗಾಗಿ ಅದರಲ್ಲಿಯು ತನ್ನ ದಿಟ್ಟತನದಿಂದ ಜೀವನ ನಡೆಸುತ್ತವೆ. ಇದರಿಂದ ಕುಟುಂಬವು ತನ್ನ ಎಲ್ಲಾ ಆಯಾಮಗಳನ್ನು ಬಿಚ್ಚಿಕೊಳ್ಳುತ್ತವೆ. ಬೀಚನಹಳ್ಳಿ ಅವರು ಬರೆದಿರುವ 'ಒಂದು ಅಪೂರ್ವ ಸಂಸಾರ', 'ಗೌರಿ', 'ಸಂಗತಿಗಳು', 'ಜೊತೆಗಾತಿ', 'ಗುಬ್ಬಚ್ಚಿಗಳು', 'ಆಸಕ್ತಿ', 'ದನಿ', 'ಕಲ್ಯಾಣಿ', 'ಹಂದಿ ಲಕ್ಕವ್ವ' ಮುಂತಾದ ಕತೆಗಳಲ್ಲಿ ದಾಂಪತ್ಯ ಹಾಗೂ ವಿಷಮ ದಾಂಪತ್ಯದ ಸ್ವರೂಪವನ್ನು ಗುರುತಿಸಬಹುದಾಗಿದೆ.

'ಒಂದು ಅಪೂರ್ವ ಸಂಸಾರ' ಒಂದು ಮುಸ್ಲಿಂ ಕುಟುಂಬಕ್ಕೆ ಸಂಬಂಧಿಸಿದ್ದು. ಸಾಬುಲಾಲು ಹಾಗೂ ಬೂಬಮ್ಮ ಗಂಡ-ಹೆಂಡತಿ. ಕುಟುಂಬ ಸುಸುತ್ರವಾಗಿ ನಡೆಯಬೇಕೆಂದರೆ ಮನೆಯ ಸದಸ್ಯರೆಲ್ಲರು ಕೂಡಿ ದುಡಿಯಬೇಕು. ಅಂತೆಯೇ ಈ ಕುಟುಂಬದಲ್ಲಿ ದಂಪತಿಗಳು, ಮಕ್ಕಳು ಸೇರಿ ದುಡಿದರೂ ಸಹ ಒದೊಂಪ್ಪತ್ತು ಹಬ್ಬದ ಅಡಿಗೆ ಊಟಕ್ಕೆ ಗರೆಯಿಲ್ಲದಂತಾಗುತ್ತದೆ. 'ಗೌರಿ' ಕತೆಯಲ್ಲಿಯು ಸಹ ದಾಂಪತ್ಯದ ಪರಿಕಲ್ಪನೆಯನ್ನು ಗುರುತಿಸಬಹುದು. ಆದರೆ ಇಲ್ಲಿ ವಿಶೇಷವಾಗಿ ವಿಷಯ ದಾಂಪತ್ಯವು ಕೊನೆಯಲ್ಲಿ ಎದ್ದುಕಾಣುತ್ತದೆ.

ಗೌರಿಯು ತನ್ನ ಪ್ರೀತಿಯ ಹಂಗಿಗೆ ಸಿಲುಕಿ ಮುಸ್ಲಿಂ ಜಾತಿಯ ಮಹಮದ್‌ನೊಂದಿಗೆ ಓಡಿ ಹೋಗುತ್ತಾಳೆ. ಕತೆಯಲ್ಲಿ ಬರುವ ಪತ್ರಕರ್ತ ಅಥವಾ ಬರಹಗಾರನಾದ ಪುಟ್ಟಣ್ಣ ಇವರಿಬ್ಬರ ಪ್ರೇಮವನ್ನು ಒಂದು ಕತೆಯನ್ನಾಗಿ ಬರೆದು ಪ್ರಕಟಿಸುತ್ತಾನೆ. ಅಂದರೆ ಈ ವಿಷಯ ದಾಂಪತ್ಯದಿಂದ ತನ್ನನ್ನು ಸಾಕಿ ಸಲುಹಿದ ತನ್ನಜ್ಜಿ 'ಬೊಂಡದ ಗುಂಡಮ್ಮ'ನನ್ನ, ತೆಜಿಸುವುದು ಸರಿಕಾಣುವುದಿಲ್ಲ. ಪ್ರೀತಿಯೆಂಬುದು ಮಾಯೆಯ ತರ ಅದು ತಂದೆ-ತಾಯಿ, ಬಂದು-ಬಳಗವನ್ನೆಲ್ಲಾ ತೆಜಿಸುವಂತೆ ಮಾಡುತ್ತದೆ. ಇದರಿಂದ ಹೆತ್ತ ಕರುಳಿಗೆ ದುಖಃವನ್ನು ತಂದುಕೊಡುತ್ತವೆ.

'ಸಂಗಾತಿಗಳು" ಕತೆಯಲ್ಲಿ ಪತಿ-ಪತ್ನಿಯರ ಸಹಕಾರ ಭಾವನೆಯು ಅತ್ಯಂತ ವಿಭಿನ್ನ ರೀತಿಯಲ್ಲಿ ಮೂಢಿ ಬಂದಿದೆ. ಆಸಿಪಾಳ್ಯದ ಚೆನ್ನಯ್ಯ ಪತ್ನಿ ನಂಜವ್ವ ಹಾಗೂ ಅಬ್ದುಲ್, ಅಜೀಜ್‌ಸಾಬ್-ಪತ್ನಿ ಫಾತಿಮಾ ಅತ್ಯಂತ ಸಹಾಕರ ಸಾಮರಸ್ಯದ ಬದುಕನ್ನು ನಡೆಸುವಂತವರು. ಇವರ ಉತ್ತಮ ದಾಂಪತ್ಯದ ಜೀವನ ಅವರ ಅಭಿವೃದ್ಧಿಗೆ ಕಾರಣವಾಗುತ್ತದೆ. ಬೀಚನಹಳ್ಳಿ ಅವರು 'ಸಂಗಾತಿಗಳು' ಕತೆಯಿಂದ ಸಮಾಜಕ್ಕೆ ಸಾಮರಸ್ಯ ಸಹಕಾರದ ಭಾವನೆಯನ್ನು ಮೂಢಿಸುವತ್ತ ಹೊರಟಿದ್ದಾರೆ. 'ಜೊತೆಗಾತಿ' ಕತೆಯಲ್ಲಿ ಪ್ರೀತಿಸಿದವರು ಒಂದಾಗುವ ಪ್ರಸಂಗ ಬರುತ್ತದೆ. ಕೃಷ್ಣಪ್ಪ ಬಾಲವಿಧವೆಯಾದ ನೇತ್ರಾವತಿಯನ್ನು ಪ್ರೀತಿಸಿರುತ್ತಾನೆ. ಇದು ತಂದೆಗೆ ಗೊತ್ತಾಗಿ ಬೇಡವೆಂದಾಗಲೂ ಕೊನೆಯಲ್ಲಿ ಒಪ್ಪಿಗೆ ಕೊಳ್ಳುವ ಹೃದಯವು ಅತ್ಯಂತ ಮನೋಜ್ಞವಾದದ್ದು.

ಬೀಚನಹಳ್ಳಿ ಅವರು ದಾಂಪತ್ಯ ಪರಿಕಲ್ಪನೆಯನ್ನು ಹೆಣ್ಣು ಗಂಡುಗಳ ಸಂಶಯದ ಅಂಶಗಳನ್ನು 'ಗುಬ್ಬಚ್ಚಿಗಳು' ಕತೆಯಲ್ಲಿ ಅತ್ಯಂತ ಸರಳ, ಸ್ಪಷ್ಟ, ವಿಶಿಷ್ಟವಾಗಿ ಕಟ್ಟಿ ಕೊಟ್ಟಿದ್ದಾರೆ. ಗಂಡು ಗುಬ್ಬಿಯು ತನ್ನ ಹೆಂಡತಿಯ ಕಥೆಯನ್ನು ಚೆನ್ನಜ್ಜನಿಗೆ ಹೇಳುವ ರೀತಿ ಚೆನ್ನಾಗಿದೆ. ಹೆಂಡತಿಯ ಆಸೆಯನ್ನು ಈಡೇರಿಸಲು ಹೋದಾಗ ಅವನು ಬರುವುದು ತಡವಾದಾಗ ಹೆಣ್ಣು ಗುಬ್ಬಿಯು ಹೀಗೆ ನಿಶ್ಚಯ ಮಾಡುತ್ತದೆ.

"ಸಂಜೆ ಹೋದ ನನ್ನ ಗಂಡ ಇನ್ನೂ ಬರಲಿಲ್ಲವಲ್ಲ ದೇವರೇ ಅವನಿಗೆ ಏನಾಯ್ತು! ಬರಲಿ, ಇವತ್ತು ಅವನು ಮನೆಗೆ, ಅವನಿಗೆ ಸರಿಯಾಗಿ ಬುದ್ಧಿ ಕಲಿಸದೆ ಇದ್ರ ನಾನು ನಮ್ಮಪ್ಪನಿಗೆ ಹುಟ್ಟಿದ ಮಗಳೇ ಅಲ್ಲ!"[7]

ಹೀಗೆ ಹೆಣ್ಣು ಗುಬ್ಬಿಯು ನಿಶ್ಚಯ ಮಾಡಿಕೊಂಡು ತನ್ನ ಗಂಡ ಬರುವ ಆಕಾಶದ ಹಾದಿಯನ್ನೆ ಕಾಯುತ್ತಾ ಕೂತಿತ್ತು. ಈ ರೀತಿಯ ಆಲೋಚನೆಯು ಗಂಡ ಮನೆ ಬಿಟ್ಟು ಹೋದ ಮೇಲೆ ಹೆಂಡತಿಯರ ಮನಸ್ಸಿನಲ್ಲಿ ಇಂತಹ ಆಲೋಚನೆಗಳು ಬರುವುದು ಸಹಜ. ಅದನ್ನು ಬೀಚನಹಳ್ಳಿಯವರು ಒಂದು ಹೆಣ್ಣು ಗುಬ್ಬಿಯ ಮೂಲಕ ವ್ಯಕ್ತಪಡಿಸಿದ್ದಾರೆ. ಹೆಂಡತಿಯ ಆಸೆಯನ್ನು ಈಡೇರಿಸುವ ಸಲುವಾಗಿ ಮಳೆ-ಗಾಳಿ-ಹುಡುಗು ಸಿಡಿಲಲ್ಲಿ ಬಿದ್ದು ಒದ್ದಾಡಿ ಮೈಯೆಲ್ಲ ಮುಳ್ಳಿಗೆ ಸಿಕ್ಕಿ ರಕ್ತ ಸೋರಿಸಿಕೊಂಡು "ಸೀಗೆ ಸೊಪ್ಪ"ನ್ನು ತಂದು

ಕೊಟ್ಟರೆ ತನ್ನ ಗಂಡನ ಕಷ್ಟವನ್ನು ಅರಿಯದ ಹೆಣ್ಣು ಗುಬ್ಬಿಯು ಹೀಗೆ ಹೇಳುತ್ತದೆ.

"ನಿನ್ನ ಸೊಪ್ಪು ಯಾರಿಗೆ ಬೇಕು? ನಿಜ ಹೇಳು! ರಾತ್ರಿ ಎಲ್ಲಿಗೆ ಹೋಗಿದ್ದೆ? ಯಾವಳತ್ರ ಚಕ್ಕಂದ ಆಡ್ಕೊಂಡು ಇದ್ದೆ? ಮೈಮೇಲೆಲ್ಲಾ ಗೀರುಗಳು ಕಾಣ್ತಾವಲ್ಲ! ಈ ಸುಳ್ಳುನ್ನೆಲ್ಲಾ ನನ್ನ ಹತ್ತಿರ ಕತೆ ಕಟ್ಟ ಬಣ್ಣಿಸಬೇಡ!"[೨]

ಎಂದು ಹೆಣ್ಣು ಗುಬ್ಬಿಯು ಗಂಡು ಗುಬ್ಬಿಯ ಮೇಲೆ ರಂಗಾಯಿತು. ಇದುಕುಟುಂಬದಲ್ಲಿ ಗಂಡ-ಹೆಂಡತಿಯರ ನಡುವೆ ನಡೆಯುವ ಸಹಜವಾದ ಪ್ರಕ್ರಿಯೆಯಾಗಿದೆ. ಹೆಣ್ಣು ಗುಬ್ಬಿಯ ಈ ಮಾತಿಗೆ ಗಂಡು ಗುಬ್ಬಿಯು ಹೀಗೆ ಹೇಳುತ್ತದೆ.

"ನನ್ನ ಹೆತ್ತ ತಾಯಿಯ ಮೇಲಾಣಿ, ನನ್ನ ಹುಟ್ಟಿಸಿದ ನನ್ನಪ್ಪನ ಮೇಲಾಣಿ, ನನ್ನ ಮನೆಯ ದೇವರ ಮೇಲಾಣಿ, ನಿನ್ನ ಮೇಲಾಣಿ, ನಿನ್ನ ವಿಷಯದಲ್ಲಿ ನಾನು ಏನಾದರೂ ಎಂದಾದರೂ ಸುಳ್ಳು ಹೇಳಿದ್ದೀನಾ? ದ್ರೋಹ ಮಾಡಿದ್ದೀನಾ? ಹಾಗೆ ನಾನು ವಂಚನೆ ಮಾಡಿದ್ದೇ ಆಗಿದ್ದರೆ ನಾಳೆ ನಿನ್ನ ಹೊಟ್ಟೆಯಲ್ಲಿ ಜನ್ಮತಾಳುವ ನನ್ನ ಜೀವ ಸಂತತಿಯೇ ನಾಶವಾಗಿ ಹೋಗಲಿ! ನಿನ್ನನ್ನು ಬಿಟ್ಟು ನಾನು ನ್ನ ಜೀವನದಲ್ಲಿಯೇ ಬೇರೆ ಯಾರನ್ನೂ ಕಣ್ಣೆತ್ತಿಯೂ ನೋಡಿಲ್ಲ. ಹಾಗೆ ನೋಡಿದ್ದೇ ಆಗಿದ್ದರೆ ಇ ನನ್ನ ಕಣ್ಣುಗಳೇ ಇಂಗಿ ಹೋಗಲಿ ನಾನು ರಾತ್ರಿ ನನ್ನ ಪೂರ್ವಜರ ಪುಣ್ಯದ ಫಲದಿಂದ ಬದುಕಿ ಬಂದದ್ದೇ ಹೆಚ್ಚು. ಅಷ್ಟೇ ಅಲ್ಲ. ನಮ್ಮಿಬ್ಬರ ನಡುವಿನ ಈ ಪ್ರೀತಿಯ ಗೂಡಿಗೆ ದ್ರೋಹ ಮಾಡಿದ್ದೇ ಆಗಿದ್ದರೆ, ನನಗೆ ನನ್ನ ಮುಂದಿನ ಜನ್ಮದಲ್ಲಿ ಆ ಪಾಪಿ ನರಮನುಷ್ಯನ ಜನ್ಮ ಬರಲಿ!"[೩]

ಎಂದು ಗಂಡು ಗುಬ್ಬಿ ಹೆಣ್ಣು ಗುಬ್ಬಿಗೆ ಹತ್ತಿರ ಪರಿಪರಿಯಾಗಿ ಹೇಳಿಕೊಳ್ಳುತ್ತದೆ. ತನ್ನ ನಿಜ ಸ್ಥಿತಿಯನ್ನು ಹೇಳಿದಾಗಲೂ ಒಪ್ಪುವುದಿಲ್ಲ. ಒಪ್ಪದಿರುವುದಕ್ಕೆ ಕಾರಣವೇನು? ಇಂದಿನ ಸಮಾಜದಲ್ಲಿ ಗಂಡು ಬೇರೊಬ್ಬರ ಸುಖವನ್ನು ಬಯಸಿ ಬೇರೆಯವರೊಂದಿಗೆ ಅನೈತಿಕ ಸಂಬಂಧ ಬೆಳೆಸುತ್ತಾರೆ. ಇಂದಿನ ಕುಟುಂಬಗಳಲ್ಲಿ ಗಂಡ-ಹೆಂಡತಿಯರ ಹೆಚ್ಚಾಗಿ ಜಗಳಗಳು ಇದೇ ಕಾರಣದಿಂದ ಆಗುತ್ತವೆ. ಗಂಡಂದಿರು ಹಾಗೆಯೇ ಮಾಡುತ್ತಾರೆ. ಬೀಚನಹಳ್ಳಿ ಅವರು ಒಂದು ಉತ್ತಮ ತಂತ್ರಗಾರಿಕೆಯನ್ನು ಅಳವಡಿಸಿಕೊಂಡು ಗುಬ್ಬಿಗಳಮೂಲಕ ಸಮಾಜಕ್ಕೆ ಸತ್ಯ ಸಂಗತಿಯನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ. ಅಂದರೆ ಇಂದಿನ ಜನತೆಯು ಬದಲಾಗಿದ್ದಾರೆ. ಅಂತಹ ಅನೈತಿಕೆಯತ್ತ ತಲೆಹಾಕುವುದಿಲ್ಲ. ಪ್ರಮಾಣಿಕ ವ್ಯಕ್ತಿಗಳಾಗಿದ್ದಾರೆ ಎಂಬುದನ್ನು ಅನುಮಾನಾಸ್ಪದವಾಗಿ ನೋಡು ಸಮಾಜಕ್ಕೆ ತಿಳಿಹೇಳುವ ಕೆಲಸ ಮಾಡಿದ್ದಾರೆ.

ಬೀಚನಹಳ್ಳಿ ಅವರು ಬರೆದ ಕಥೆಗಳಲ್ಲಿ ಅತ್ಯಂತ ವಿಶಿಷ್ಟವಾದ ಕಥೆಯೆಂದರೆ 'ಹಂದಿ ಲಕ್ಕವ್ವ'. ಹಂದಿ ಲಕ್ಕವ್ವ ಕತೆಯು ಏಕೆ ವಿಶಿಷ್ಟತೆಯಿಂದ ನೋಡಬಹುದು ಎಂದರೆ, ಇದರಲ್ಲಿ ಬರುವ ಸ್ವಚ್ಛ ಮನಸ್ಸಿನ, ಸರಳ ಹೃದಯವನ್ನು ಒಳಗೊಂಡ ವ್ಯಕ್ತಿಗಳನ್ನು ಬೀಚನಹಳ್ಳಿಯವರು ಸಮಾಜಕ್ಕೆ ಸೂಕ್ಷ್ಮವಾಗಿ ತೋರಿಸುವ ಕೆಲಸ ಮಾಡಿದ್ದಾರೆ. ಇಲ್ಲಿ ಪ್ರಮುಖವಾಗಿ 'ಕಾಡಣ್ಣ'ನ ಹೃದಯ ವೈಶಾಲತೆ, ಹೆಂಡತಿಯರಾದ 'ಗಂಗಮ್ಮ, ಗೌರಮ್ಮ'ರ ಮನಸ್ಸಿನ ವೈದಾಟಗಳನ್ನು ಬೀಚನಹಳ್ಳಿ ಅವರು ಅತ್ಯಂತ ಸೂಕ್ಷ್ಮವಾಗಿ ಕಟ್ಟಿಕೊಟ್ಟಿದ್ದಾರೆ.

'ಕಾಡಣ್ಣ', 'ಹಂದಿ ಲಕ್ಕವ್ವ'ನನ್ನು, ಆಕೆಯ ಹಂದಿಗಳನ್ನು ತನ್ನ ಮನೆಗೆ ಕರೆತಂದಾಗ ಊರಿನಲ್ಲೆಲ್ಲಾ ಕಾಡ್ಗಿಚ್ಚಿನಂತೆ ಹರಡಿ, ಕಾಡಣ್ಣನಿಗೂ ಲಕ್ಕವ್ವನಿಗೂ ಆಗಲೇ ಇಲ್ಲದ ಸಲ್ಲದ ಸಂಬಂಧಗಳನ್ನು ಕಲ್ಪಿಸಿ ಜನ ಮಾತನಾಡುವುದಕ್ಕೆ ಶುರು ಮಾಡಿದ್ದರು. ಹೀಗೆ ಇನ್ನೊಬ್ಬರ ಬಗ್ಗೆ ಆಡಿಕೊಳ್ಳುವುದು ಕಥೆಯಲ್ಲಷ್ಟೇ ಇಲ್ಲ. ಅದು ಸಮಾಜದಲ್ಲಿ ದಿನನಿತ್ಯ ನಡೆಯುತ್ತಿರುತ್ತದೆ. ಒಬ್ಬ ಹೆಣ್ಣನ್ನು ಕುರಿತು ಮತ್ತೊಬ್ಬ ಹೆಣ್ಣು ಆಡಿಕೊಳ್ಳವುದು ಆಕೆಯ ಮೇಲೆ ದೇವರು ಬಿಡುವುದು, ದೇವರು ಮಾಡಿಸುವುದು, ಮಾಟ-ಮಂತ್ರ ಮಾಡಿಸಿ ಅವರ ಮನೆಯಲ್ಲಿ ಅಥವಾ ಅವರ ಹೊಲದಲ್ಲಿ ಇಡುವ ಪ್ರಸಂಗ ಈಗಲೂ ಹಳ್ಳಿಗಳಲ್ಲಿ ಇಲ್ಲದಿಲ್ಲ. 'ಹಂದಿ ಲಕ್ಕವ್ವ' ತಮ್ಮ ಮನೆಗೆ ಬಂದಾಗ ಬೇರೆ ಬೇರೆಯಾಗಿದ್ದ ಸವತಿಯರು (ಗಂಗಮ್ಮ-ಗೌರಮ್ಮ) ಒಂದಾಗುತ್ತಾರೆ. ಇವರಿಬ್ಬರು ಸೇರಿ ಹಂದಿ ಲಕ್ಕವ್ವನನ್ನು ಮನೆ ಬಿಡಿಸುವ ಪ್ರಯತ್ನ ಮಾಡುತ್ತಾರೆ. ಇವರಿಬ್ಬರು ದೇವರ ಹತ್ತಿರ ಹೋಗುವುದು, ಮನೆಯಲ್ಲಿ ದಿನನಿತ್ಯ ಗಂಡನೊಂದಿಗೆ ಜಗಳ, ಗುಸು-ಗುಸು ಮಾತುಗಳು, ಅವರ ಮನದಾಳದವೈದಾಟಗಳೆಲ್ಲಾ 'ಹಂದಿ ಲಕ್ಕವ್ವ'ನಿಗೆ ಅರ್ಥವಾಗುತ್ತದೆ. ಆಕೆಯು ಅರ್ಥಮಾಡಿಕೊಂಡು ಒಂದು ದಿನ ಮನೆ ಬಿಟ್ಟು ಹೋಗುತ್ತಾಳೆ.

ಬೀಚನಹಳ್ಳಿ ಅವರು 'ಹಂದಿ ಲಕ್ಕವ್ವ' ಕಥೆಯಿಂದ ಸಮಾಜಕ್ಕೆ ಮನವರಿಕೆ ಮಾಡಿಕೊಡುವ ಅಂಶವೆನೆಂದರೆ ಸಮಾಜ ಬದಲಾಗಿದೆ. ಹೆಣ್ಣಿನ ಭಾವನೆಗಳು ಬದಲಾಗಿವೆ. ಒಂದು ಹೆಣ್ಣು ಸಮಾಜವನ್ನು ಸೂಕ್ಷ್ಮವಾಗಿ ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಹೊಂದಿದ್ದಾಳೆ. ಹಾಗೆಯೇ ಗಂಡು ಕೂಡ ಹೆಣ್ಣಿನ ನಿಜ ಸಂಗತಿಯನ್ನು ಅರಿತು, ಕಷ್ಟದಲ್ಲಿರುವವರಿಗೆ ಸಹಾಯ ಮಾಡುವ ಮನೋಭಾವನೆಯನ್ನು ಬೆಳೆಸಿಕೊಂಡಿದ್ದಾನೆ ಎಂಬ ಅಂಶವನ್ನು ಹೇಳುತ್ತದೆ. ಹೆಣ್ಣು-ಹೆಣ್ಣುಗಳ ನಡುವೆ ಸಂಘರ್ಷವಿರಬಾರದು ಬದಲಾಗಿ ಸಾಮರಸ್ಯವಿರಬೇಕು. ಹಾಗೆಯೇ ಹೆಂಡತಿಯಾದವಳು ಗಂಡನ ಪ್ರತಿಯೊಂದು ವಿಷಯ ಸಂಗತಿಯನ್ನು ಪರಿಶೀಲಿಸಿ ಒರೆಗಲ್ಲಿಗಚ್ಚಿ ನೋಡಬೇಕು ಎಂಬ ಅಂಶವನ್ನು 'ಹಂದಿ ಲಕ್ಕವ್ವ' ಕಥೆಯಿಂದ ತಿಳಿದು ಕೊಳ್ಳಬಹುದು.

**೩.೫. ಸಂಘರ್ಷದಿಂದ ಸಾಮರಸ್ಯದೆಡೆಗೆ:**

ಒಡೆದ ಮನಸ್ಸುಗಳನ್ನು ಮತ್ತೆ ಬೆಳೆಸುವುದು ಡಾ. ಕರೀಗೌಡ ಬೀಚನಹಳ್ಳಿ ಅವರ ಬಹುಪಾಲು ಕತೆಗಳ ಸಾಮಾನ್ಯ ಲಕ್ಷಣವಾಗಿದೆ. ಯಾಂತ್ರಿಕ ಬದುಕನ್ನು ನಡೆಸುತ್ತಿರುವ ಗ್ರಾಮದ ಜನತೆಯು ಸಂಸಾರದ ಒಡತಿಯಿಂದ, ಸಂಸ್ಕಾರಗಳಿಂದ ತಂದೆಯ ಆಸ್ತಿಯಿಂದ ಹೀಗೆ ಹಲವು ಕಾರಣಗಳಿಂದ ಸಮಸ್ಯೆಯಾಗಿಯೇ ಕುತಂತ್ರದಿಂದಾಗಿಯೇ ಒಣ ಪತಿಷ್ಠೆಯಿಂದಾಗಿಯೇ ತಾತ್ಕಾಲಿಕವಾಗಿ ಸಂಘರ್ಷ ಏರ್ಪಡಿಸುತ್ತದೆ. ಇದು ಅನಿವಾರ್ಯ ಕೂಡ. ಆದರೆ ಈ ಸಂಘರ್ಷ ಸ್ಥಾಯಿಯಾಗಬಾರದೆಂಬುದೇ ಬೀಚನಹಳ್ಳಿಯವರ ಆಶಯ. "ಆಸಕ್ತಿ", 'ಅವಮಾನ' ಇನ್ನು ಮುಂತಾದ ಕತೆಗಳಲ್ಲಿ ಸಂಘರ್ಷದ ಅಂಶಗಳು ಕಂಡು ಬರುತ್ತವೆ. ಈ ಕತೆಗಳಲ್ಲಿ ಒಡೆದ ಮನಸ್ಸು, ಬಿರುಕು ಬಿಟ್ಟ ಸ್ನೇಹ, ಮುರಿದ ಮನೆ,

ಮತ್ತೆ ಒಂದಾಗುವ ಸಹಜ ಚಿತ್ರಣವಿದೆ. ಡಾ. ಕರೀಗೌಡ ಬೀಚನಹಳ್ಳಿಯವರು ಈ ಅಂಶಗಳನ್ನು ಗುರುತಿಸಲು ಇವರ ಮೇಲೆ ಗಾಂಧಿ ವಿಚಾರಧಾರೆಗಳು ಗಾಢ ಪ್ರಭಾವ ಬೀರಿರುವುದನ್ನು ಇಲ್ಲಿ ಗಮನಿಸಬಹುದು. ಹೀಗಾಗಿ ಬಂಡಾಯವೆನ್ನಬಹುದಾದ ಸಂಘರ್ಷದ ಮಾದರಿಗಿಂತ ಮನಸ್ಸುಗಳನ್ನು ಬೆಸೆಯುವಂತೆ ಮೂಡಿಸುವ ಬೀಚನಹಳ್ಳಿಯವರ ಮನುಷ್ಯ ನಂಬಿಕೆ ಇಲ್ಲಿ ಮುಖ್ಯವಾಗಿದೆ.

ಕೌಟುಂಬಿಕ ವಿಘಟನೆಯ ಘಟಕಗಳು ತಾತ್ಕಾಲಿಕವಾಗಿ ರೂಪಗೊಂಡು ಒಂದು ಭಾವನಾತ್ಮಕ ಸಂದರ್ಭದಲ್ಲಿ ಒಂದುಗೂಡುವುದನ್ನು ಬೀಚನಹಳ್ಳಿ ಕೆಲ ಕಥೆಗಳಲ್ಲಿ ಸರಳವಾಗಿ ಕಟ್ಟಿಕೊಟ್ಟಿದ್ದಾರೆ. ಆ ವಿಘಟನೆಗಳು ಅನ್ಯರ ಪ್ರಭಾವದಲ್ಲಿರಬಹುದು ಅಥವಾ ತನ್ನ ನೆಲೆಯನ್ನು ಭದ್ರಪಡಿಸಿಕೊಳ್ಳಬೇಕೆಂಬ ಆಸಕ್ತಿಯಿಂದ ಆಗಿರಬಹುದು. ಅದನ್ನು ಬೀಚನಹಳ್ಳಿಯವರು ಬದುಕಿನ ಅನಿವಾರ್ಯವಾಗಿ ಸ್ವೀಕರಸುವುದಿಲ್ಲ. ಅದರಿಂದ ಸ್ಥಾಯಿಯಾಗುವುದನ್ನು ವಿರೋಧಿಸುತ್ತಾರೆ. ಅದಕ್ಕೆ ಉತ್ತಮ ನಿದರ್ಶನದ ಕತೆಗಳೆಂದರೆ "ಆಸಕ್ತಿ" ಮತ್ತು "ಅವಮಾನ" ಹಾಗೂ "ಕೋಳಿಪಾಲು".

ಬೀಚನಹಳ್ಳಿಯವರು ಕೌಟುಂಬಿಕ ಸಮಸ್ಯೆಗಳು ತನ್ನ ಬಾಲ್ಯದಿಂದ ಕಂಡುಂಡು ಅನುಭವವಿಸಿದ ಸಂಗತಿಗಳನ್ನು ಕತೆಗಳ ಮೂಲಕ ತನ್ನ ವೇದನೆಯನ್ನು ತಿಳಿಸಿಕೊಡುವಲ್ಲಿ ಪ್ರಯತ್ನಿಸಿದ್ದಾರೆ. ಇಂದಿನ ಸಮಾಜದ ಕುಟುಂಬ ಸಂಬಂಧ ಜೀವನದಲ್ಲಿ ಸಂಘರ್ಷಗಳು, ಸಮಸ್ಯೆಗಳು, ಅಡತಡೆಗಳು ಸಹಜವಾಗಿವೆ. ಇವುಗಳ ಸಾಮರಸ್ಯ ಬೆಸೆಯಲು ಬೀಚನಹಳ್ಳಿ ಪ್ರಯತ್ನಿಸಿದ್ದಾರೆ. ಸಂಘರ್ಷದಿಂದ ಸಾಮರಸ್ಯದೆಡೆಗೆ ಎಂಬ ಅಂಶವನ್ನು ಬೀಚನಹಳ್ಳಿಯವರು ತಮ್ಮ ಕಥಾ ಸಂಕಲನದಲ್ಲಿ ಬರುವ "ಆಸಕ್ತಿ" ಕಥೆಯು ಉತ್ತಮ ನಿದರ್ಶನವಾಗಿದೆ. ಈ ಕಥೆಯ ಆಶಯವು ಸಹ ಸಾಮರಸ್ಯದ ಭಾವನೆಯನ್ನು ಮೂಡಿಸುವಂತಿದೆ. ಇಲ್ಲಿ ಕಂಡುಬರುವ ಒಂದೇ ಮನೆಯು ಎರಡು ಮನೆಗಳಾಗಿರುವುದನ್ನು ಕಾಣಬಹುದು. ಅದು 'ಗಂಗಣ್ಣ'ನಿಗೆ ಗೊತ್ತಿದ್ದ ವಿಷಯ. ಬೀಚನಹಳ್ಳಿಯವರು ಗಂಗಣ್ಣನ ಆಸೆಯನ್ನು ಕೇಂದ್ರವಾಗಿಟ್ಟುಕೊಂಡು ಸಮಾಜವನ್ನು ತಿದ್ದುವ ಕೆಲಸ ಮಾಡಿದ್ದಾರೆ. ಅಂದರೆ ಗಂಗಣ್ಣನ ಪ್ರಕಾರ ಒಡೆದ ಎರಡು ಮನಸ್ಸುಗಳನ್ನು ಒಂದು ಮಡುವುದಾಗಿತ್ತು. ತನ್ನ ಮೊದಲನೇ ಮಗನಿಗೂ ಸಹ ಪಾಲು ಸಿಗಬೇಕೆಂಬುದು ಅವನ ಆಸೆಯಾಗಿತ್ತು. ಇದರಿಂದ ಬೀಚನಹಳ್ಳಿ ಅವರು ಯಾರ್ಯಾರಿಗೆ ಯಾವ ರೀತಿಯ ಪಾಲು ಸಿಗಬೇಕು, ಹಾಗೆಯೇ ತನ್ನ ಆಸೆಯು ಈಡೇರಬೇಕು ಸಮಾಜ ಒಂದಾಗಿ ಬಾಳಬೇಕು ಎಂಬುದನ್ನು ತಿಳಿ ಹೇಳಿದ್ದಾರೆ. "ಆಸಕ್ತಿ" ಕತೆಯು ಕೊನೆಯ ಹಂತದಲ್ಲಿ ಸಾಮರಸ್ಯದ ಭಾವನೆಯನ್ನು ಹುಟ್ಟು ಹಾಕುತ್ತದೆ. ಅದನ್ನು ಬೀಚನಹಳ್ಳಿಯವರು ಗಂಗಣ್ಣನ ಮಗನ ಕೈಯಿಂದ ಸಾಧಿಸಲು ಪ್ರಯತ್ನಿಸಿದ್ದಾರೆ.

ಸಮಾಜ ನಿಂತ ನೀರಲ್ಲ ಅದು ಸದಾ ಹರಿಯುವ ನೀರಿನಂತೆ ಪ್ರತಿ ಹಂತದಲ್ಲಿ ಪ್ರತಿಕ್ಷಣ-ಕ್ಷಣಕ್ಕೂ ಬದಲಾವಣೆಯನ್ನು ಹೊಂದುತ್ತರುತ್ತದೆ. ಹಾಗೆಯೇ ಅಭಿವೃದ್ಧಿಗೊಂಡು ನಾಗರೀಕತೆಯತ್ತ ಸಾಗುತ್ತದೆ. ಬೀಚನಹಳ್ಳಿಯವರು ಇದೇ ಅಂಶವನ್ನು ತಮ್ಮ 'ಆಸಕ್ತಿ'

ಕಥೆಯಲ್ಲಿ ಕಟ್ಟಿ ಕೊಟ್ಟಿದ್ದಾರೆ. ಅಂದರೆ ಇಲ್ಲಿ 'ಗಂಗಣ್ಣ' ಹಳೆ ತಲೆಮಾರಿನವ, ಅವನ ಹೆಂಡತಿಯರು ಅವನಂತೆಯೇ. ಆದರೆ ಅವನ ಮಗ ಮಾತ್ರ ವಿದ್ಯಾವಂತ. ಓದು ಬರಹ ಕಲಿತವನು ಪ್ರತಿಯೊಂದನ್ನು ಒರಗಲ್ಲಚ್ಚಿ ನೋಡುವ ಮನೋಭಾವವುಳ್ಳವನು. ಅವನು ಒಡಿದ ಮನಸ್ಸುಗಳನ್ನು ತನ್ನ ತಂದೆಯ ತಿಥಿಯ ಸಂದರ್ಭದಲ್ಲಿ ಒಂದು ಮಾಡಿದ್ದು ಕತೆಗೆ ಶಕ್ತಿಯನ್ನು ತಂದು ಕೊಡುತ್ತದೆ.

ಬೀಚನಹಳ್ಳಿ ಅವರು 'ಅವಮಾನ' ಕತೆಯಲ್ಲು ಸಹ ಸಾಮರಸ್ಯದ ಅಂಶಗಳನ್ನು ಹಿಡಿದಿಟ್ಟಿದ್ದಾರೆ. ಇದರೊಂದಿಗೆ ಸಮಾಜವನ್ನು ತಿರುಚುವ ಕೆಲಸ ಮಾಡಿದ್ದಾರೆ. 'ಆಸಕ್ತಿ' ಕತೆಯಲ್ಲಿ ಹೊಸ ತಲೆಮಾರಿನವರಿಂದ ಸಾಮರಸ್ಯ ಬೆಸೆಯುವ ಕೆಲಸ ಮಾಡಿದರೆ 'ಅವಮಾನ' ಕತೆಯಲ್ಲಿ ಆ ಕೆಲಸ ಹಳೆ ತಲೆಮಾರಿನವರಿಂದ ಆಗಿದೆ. ಅಂದರೆ ಕರಿಸಿದ್ದೇಗೌಡನ ತಿಥಿ ಮಾಡಲು ಕುಂಟಪ್ಪನ ಹೊತವನ್ನು ಬಳಸಿಕೊಂಡದ್ದು ಸಂಘರ್ಷಕ್ಕೆ ಕಾರಣವಾಗುತ್ತದೆ. ಈ ಸಂಘರ್ಷ ಪೊಲೀಸ್ ಸ್ಟೇಷನ್‌ವರೆಗೂ ಹೋಗಿ ಅಲ್ಲಿಯ ಪರಿಣಾಮವನ್ನು ಅನುಭವಿಸಿ ಕೊನೆಯ ಹಳೆಯ ತಲೆಗಳಾದ ಕಾಳಯ್ಯ, ನಿಂಗಣ್ಣನ ಸಮ್ಮುಖದಲ್ಲಿ ಸಾಮರಸ್ಯವಾಗುತ್ತದೆ. ಇದರಿಂದ "ಅನುಭವದ ಮಾತು ಅಮೃತ" ಎಂಬ ಗಾದೆಯು ಜ್ಞಾಪಕವಾಗುತ್ತದೆ. ತಂದೆಯ ತಿಥಿಗೆ ತಾನು ಸಾಕಿದ ಹೊತವನ್ನು ಕಡಿದಿದ್ದ ಸಂದರ್ಭದಲ್ಲಿ ಕುಂಟಪ್ಪನಿಗೆ ಹಣವನ್ನು ನೀಡುತ್ತೇನೆಂದು ಹೇಳಿ ಕಾರ್ಯಮುಗಿದ ನಂತರ ಅವನಿಗೆ ಹಣ ದೊರಕದಿದ್ದ ಸಂದರ್ಭದಲ್ಲಿ ಅವರಲ್ಲಿ ಸಂಘರ್ಷ ಏರ್ಪಡುತ್ತದೆ. ಇದು ಪ್ರಮುಖವಾಗಿ ಮನುಷ್ಯ ಸಂಬಂಧವನ್ನು ಕುರಿತ ವಿಷಯವಾಗಿ ತಂದೆ, ಮಗ, ಬಂದು-ಬಳಗದ ಮನಸ್ಸಿನಾಳದಲ್ಲಿ ಎಂತಹ ಭಾವನೆಗಳಿರುತ್ತವೆ ಎಂಬುದನ್ನು 'ಅವಮಾನ' ಕತೆಯಿಂದ ತಿಳಿದುಕೊಳ್ಳಬಹುದು. ಸಮಾಜದಲ್ಲಿ ಒಡಹುಟ್ಟಿದವರ ಮನಸ್ಸಿನಲ್ಲಿ ಅಕ್ಕ-ಪಕ್ಕ ಮನಸ್ಸಿನಲ್ಲಿ ಇರುವ ಭಾವನೆಗಳನ್ನು ಅರ್ಥಮಾಡಿಕೊಳ್ಳುವುದು ಎಷ್ಟರ ಮಟ್ಟಿಗೆ ಸಾಧ್ಯ ಎಂಬುದನ್ನು ಅರಿಯ ಬೇಕಾಗಿದೆ. ಸಮಾಜದಲ್ಲಿರುವಂತಹ ಮನಸ್ಸಿನಾಳದಲ್ಲಿ ವಿಭಿನ್ನ ರೀತಿಯ ಭಾವನೆಗಳಿದ್ದು ಅವುಗಳು ಕಾಲಕ್ಕೆ ತಕ್ಕಂತೆ ಬದಲಾವಣೆಯಾಗುತ್ತಿರುತ್ತವೆ.

'ಒಂದು ಹಳೆಯ ಕತೆ' ಮತ್ತು 'ಕೋಳಿಪಾಲು' ಕತೆಗಳಲ್ಲಿಯೂ ಸಹ ಸಂಘರ್ಷ ಸಾಮರಸ್ಯವನ್ನು ಗುರುತಿಸಬಹುದಾಗಿದೆ. "ಕೋಳಿಪಾಲು" ಕತೆಯಲಿ ಬರುವ 'ಕರಡಯ್ಯ' 'ಚಿನ್ನವ್ವ'ನ ಮಗನಿಂದಲೇ ಚಿನ್ನವ್ವನ ಕೋಳಿಯನ್ನು ಕದ್ದು ತರಿಸಿಕೊಂಡು ತಿಂದು ನಂತರ ತನ್ನ ಮಗನಿಂದ ಸತ್ಯ ಹೊರಬಿದ್ದಾಗ ಕರಡಯ್ಯನನ್ನು ಕೇಳಿದಾಗ ಇಲ್ಲ, ನಾನು ಕದ್ದಿಲ್ಲ ಎಂಬ ಮಾತು ಬಂದಾಗ ಚಿನ್ನವ್ವ ಕರಡಯ್ಯನನ್ನು ಥಳಿಸಿದಾಗ ಅದನ್ನು ಕಂಡ ಕರಡಯ್ಯನ ಅಣ್ಣ ಮೂಗಣ್ಣ ಚಿನ್ನವ್ವನನ್ನು ಥಳಿಸುವುದರ ಮೂಲಕ ಸಂಘರ್ಷ ಉಂಟಾಗುತ್ತದೆ. ಇದರಿಂದ ತಿಳಿದು ಬರುವ ಅಂಶವೆಂದರೆ ತಪ್ಪು ಮಾಡಿಯು ಮಾಡಿಲ್ಲ ಎಂದಾಗ ಬರುವ ಸಿಟ್ಟು ಎಂಥಾದ್ದು ಎಂಬುದು ಒಂದು ಕಡೆಯಾದರೆ ತಮ್ಮನ ಮೇಲಿನ ಅಭಿಮಾನ ಎಂಥಾದ್ದು ಎಂಬುದನ್ನು ತಿಳಿಸಿ (ಸಮಾಜಕ್ಕೆ) ಕೊಡುತ್ತದೆ. ಕೆಲ ಸಮಯದ ನಂತರ ಕಂಡಯ್ಯ ತಪ್ಪನ್ನು ಒಪ್ಪಿಕೊಳ್ಳುವುದರ ಮೂಲಕ ಸಂಘರ್ಷಕ್ಕೆ ಇತಿಶ್ರೀ ಹಾಡಿದಂತಾಗುತ್ತದೆ.

'ಒಂದು ಹಳೆಯ ಕತೆ'ಯಲ್ಲಿ ರಾಜನು ತನ್ನ ಅವಿವೇಕತನದಿಂದ ಕುಲಗುರು ನನ್ನನ್ನು ಅವಮಾನ ಮಾಡಿದನೆಂದು ಕಾಡಿಗಟ್ಟಿದನು. ಕುಲಗುರುವಿನಿಂದಲೇ ಬಂದ ಹಣ್ಣಿನಿಂದ ಸಾಯುವವರು ಬದುಕುಳಿಯುತ್ತಾರೆ. ಇದಕ್ಕೆ ಕಾರಣರಾರು ಎಂದು ತಿಳಿದ ನಂತರ, ತಪ್ಪಿನ ಅರಿವಾದ ನಂತರ ಅದೇ ಸಭೆಯಲ್ಲಿ ಕುಗುರುವಿನ ಕಾಲಿಗೇರಿಗಿ ನನಗೆ ವಿದ್ಯೆ ಕಲಿಸು ನಾನು ನಿನ್ನ ಶಿಷ್ಯನಾಗುತ್ತೇನೆ ಎಂದನು. ಅಂದರೆ ಒಬ್ಬ ವ್ಯಕ್ತಿ, ಒಂದು ಸಣ್ಣ ತಪ್ಪನ್ನು ಒಪ್ಪಿಕೊಳ್ಳುವ ಸ್ಥಿತಿಯ ಸಾಮರಸ್ಯವನ್ನು ಬೆಸೆಯುವಲ್ಲಿ ಬಹುಮುಖ್ಯ ಪಾತ್ರವಹಿಸಿದೆ. ಅಂದರೆ ಒಟ್ಟಾರೆಯಾಗಿ ಸಮಾಜದಲ್ಲಿರುವ ಯಾವ ವ್ಯಕ್ತಿಯು ದುಡುಕ ಬಾರದು, ಕದಿಯ ಬಾರದು ಇನ್ನೊಬ್ಬರನ್ನು ಕೇವಲವಾಗಿ ನೋಡಬಾರದು ಎಂಬಾಂಶಗಳನ್ನು ತಿಳಿಹೇಳುತ್ತದೆ.

### ೩.೬. ಗ್ರಾಮೀಣ ಸಂಪ್ರದಾಯಗಳು:



ಜನಪದ ಸಂಪ್ರದಾಯಗಳು ಜಾನಪದದ ಒಂದು ಬಹು ಮುಖ್ಯ ಪ್ರಕಾರ. ಒಂದು ಜನಸಮೂಹದ ಸಂಸ್ಕಾರ ವಿಶೇಷವಾದ ಭದ್ರ ಬುನಾದಿಯ ಮೇಲೆ ರೂಪಗೊಂಡು ಪರಂಪರಾಗತವಾಗಿ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಆ ಸಮಾಜದಲ್ಲಿ ಮುಂದುವರಿಯುವ ವಿಶಿಷ್ಟ ಉಪಾಸನೆ ಪದ್ಧತಿಗಳೇ ಸಂಪ್ರದಾಯಗಳೆನಿಸುತ್ತವೆ. ಪರಂಪರೆಯಿಂದ ಬಂದ ಒಂದು ಗುಂಪಿನ ರೂಢಿ ಪದ್ಧತಿ, ಆಚರಣೆಗಳ ಒಟ್ಟು ಮೊತ್ತವೇ ಸಂಪ್ರದಾಯ, ನಂಬಿಕೆಗಳೇ ಸಂಪ್ರದಾಯಗಳಿಗೆ ಮೂಲ. ವಿಧಿ ನಿಷೇದಗಳು, ಆಚರಣೆಗಳು ಇದರಲ್ಲಿ ಬೆರೆಯುತ್ತವೆ. ಆಚರಣೆಗಳಂತೂ ಬೇರ್ಪಡಿಸಲು ಸಾಧ್ಯವಾಗದ ರೀತಿಯಲ್ಲಿ ಬೆಸೆದುಕೊಂಡಿರುತ್ತವೆ. ಜಾನಪದದ ಇತರ ರೂಪಗಳಂತೆ ಜನಪದ ಸಂಪ್ರದಾಯಗಳು ಕರ್ನಾಟಕದ ಎಲ್ಲ ಜಾತಿ ಸಮೂಹಗಳಲ್ಲಿ ರೂಢಿಯಲ್ಲಿರುವ ಸಂಪ್ರದಾಯಗಳಲ್ಲಿ ವ್ಯತ್ಯಾಸಗಳು ಗೋಚರವಾಗುತ್ತವೆ.

ಆಧುನಿಕ ಸಮಾಜಕ್ಕಿಂತ ಆದಿಮಾನವ ಸಮಾಜದಲ್ಲಿ ನಾಗರಿಕ ಸಮೂಹಗಳಿಗಿಂತ ಬುಡಕಟ್ಟು ಜನರಲ್ಲಿ, ನಗರಗಳಿಗಿಂತ ಗ್ರಾಮಾಂತರ ಪ್ರದೇಶಗಳಲ್ಲಿ ಸಂಪ್ರದಾಯಗಳು ಪ್ರಬಲವಾಗಿರುತ್ತವೆ. ಸಂಪ್ರದಾಯಗಳಲ್ಲಿ ಮೂಢನಂಬಿಕೆ, ಕಂದಾಚಾರ, ಕುತಂತ್ರಗಳು ಅಡಗಿವೆಯಾದರೂ ಸಂಪ್ರದಾಯ ಮಾನವ ಜೀವನದ ಸರ್ವಕ್ಷೇತ್ರಗಳಲ್ಲಿಯೂ ವ್ಯಾಪಿಸಿಕೊಂಡಿದೆ. ಅದೇ ಜೀವನವನ್ನು ರೂಪಿಸುತ್ತದೆ. ಅದೇ ಸಂಸ್ಕೃತಿಯ ತಿರುಳೂ ಹೌದು. ಸಂಪ್ರದಾಯದ ಅಸ್ತಿತ್ವವಿಲ್ಲದೆ ವ್ಯಕ್ತಿಯ ಕ್ರಿಯೆ ಅಥವಾ ಆಲೋಚನೆಗಳು ರೂಪಗೊಳ್ಳುವುದಿಲ್ಲ.

ಬೀಚನಹಳ್ಳಿಯವರು ಬಳಸಿಕೊಂಡಿರುವ ಬೆಂಗಳೂರು, ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಹಲವಾರು ಗ್ರಾಮದೇವತೆ ಕಂಡು ಬರುತ್ತವೆ. ಗ್ರಾಮದೇವತೆಗಳು ವಿಪುಲವಾಗಿ ಅಲ್ಲರದಿದ್ದರೂ ಸಹ ಬೀಚನಹಳ್ಳಿಯವರು ಕಲವೇ ಕೆಲವು ಕತೆಗಳಲ್ಲಿ ಗ್ರಾಮದೇವತೆಗಳನ್ನು ಗುರುತಿಸಿದ್ದರೆ ತಮ್ಮ ಕತೆಗಳ ಮೂಲಕ ಅವುಗಳ ಆಚರಣೆಗಳನ್ನು ಸೆರೆಹಿಡಿದಿದ್ದಾರೆ. ಅವುಗಳ ಪರಿಚಯ ಮಾಡಿ ಕೊಡುವುದರ ಜೊತೆಗೆ ಮಹತ್ವ, ವೈಶಿಷ್ಟ್ಯಗಳನ್ನು ತಿಳಿಸಿಕೊಡಲಾಗಿದೆ. ಗ್ರಾಮೀಣರಲ್ಲಿ ಕಂಡುಬರುವಂತಹ ಕೌಟುಂಬಿಕ ಸಮಸ್ಯೆಗಳು, ಶವ ಸಂಸ್ಕಾರ, ನಂತರ

ತಿಥಿಯ ತಯಾರಿ, ಶಿಕ್ಷಣ ಒಂದು ಚಿಕ್ಕದಾದ ವಸ್ತುವಿನ ತೊಂದರೆಯಿಂದ ಆಗುವ ಪರಿಣಾಮವನ್ನು ತಮ್ಮ ಕತೆಗಳಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ.

**ಮೂಢನಂಬಿಕೆಗಳ ಅನಾವರಣ:**

ಮೂಢನಂಬಿಕೆ ಎಂಬ ಪದವು ವಿವೇಚನೆಯಿಲ್ಲದೆ ನಂಬುವುದು ಎಂದರ್ಥ ಕೊಡುತ್ತದೆ. ಇಂದಿನ ಗ್ರಾಮೀಣ ಸಮಾಜವು ಮೂಢನಂಬಿಕೆಯನ್ನು ಹೆಚ್ಚು ಬಳಸಿಕೊಳ್ಳುತ್ತಿದೆ. ತಮ್ಮ ವಂಶಸ್ಥರು ನಡೆಸಿಕೊಂಡು ಬಂದಂತಹ ಪ್ರತಿಯೊಂದು ನಂಬಿಕೆಗಳು, ಹಬ್ಬ, ಆಚರಣೆಗಳು, ಸಂಸ್ಕಾರಗಳು ಮತ್ತಿತರ ಅಂಶಗಳನ್ನು ಇಂದಿಗೂ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಇದರಿಂದಾಗುವ ಲಾಭ-ನಷ್ಟವಾದ ಕುರಿತು ಅವರಿಗೆ ಯಾವುದೇ ಯೋಚನೆಯಿರುವುದಿಲ್ಲ. ತಮ್ಮ ವಂಶಸ್ಥರು ನಡೆಸಿಕೊಂಡು ಬಂದಂತಹ ಆಚರಣೆಗಳನ್ನು ಆಚರಿಸುವುದರಿಂದ ಲಾಭ-ನಷ್ಟಗಳನ್ನು ಆಧಾರವಾಗಿಟ್ಟುಕೊಳ್ಳದೇ ಮನದಲ್ಲಿಟ್ಟುಳ್ಳದೇ ಧನಾತ್ಮಕತೆಯಿಂದಲೇ ಸಡಗರ ಸಂಭ್ರಮದಿಂದ ಆಚರಿಸುತ್ತಾರೆ. ಒಂದು ಪಕ್ಷ ಆಚರಿಸದೇ ಇದ್ದಲ್ಲಿ ಒಂದು ಅಥವಾ ಎರಡು ದಿನಗಳಲ್ಲಿ ಮನೆಗಳಲ್ಲಿ, ಊರಲ್ಲಿ ಏನಾದರೂ ಅಪಶಕುನಗಳು ಕಂಡು ಬಂದರೆ, ಈ ಶಕುನವು ಹಬ್ಬವನ್ನು ಆಚರಿಸದಿರುವುದಕ್ಕೆ, ದೆವಿಯನ್ನು ಆರಾಧಿಸದಿರುವುದಕ್ಕೆ ಆಗಿರುವುದು ಎಂದು ನಂಬುತ್ತಾರೆ. ಈ ಕಾರಣದಿಂದಲೇ ಹಳ್ಳಿಯ ಮಂದಿ ವಂಶಪಾರಂಪರ್ಯವಾಗಿ ಆಚರಿಸಿಕೊಂಡು ಬಂದಂತಹ ತಮ್ಮ ಸಂಪ್ರದಾಯಕ್ಕೆ ಸಂಬಂಧಿಸಿದ ಆಚರಣೆಗಳನ್ನು ವರ್ತಮಾನದಲ್ಲಿ ಆಚರಿಸಿದ್ದಲ್ಲದೇ ಭೌಷತ್ತಿನಲ್ಲಿಯು ಆಚರಿಸುವಂತೆ ಮಕ್ಕಳಲ್ಲಿ ಆಚರಣೆಯ ವಿಧಾನವನ್ನು ತುಂಬುತ್ತಾರೆ.

ಡಾ. ಕರೀಗೌಡ ಬೀಚನಹಳ್ಳಿ ಅವರು ತಮ್ಮ ಕಥೆಗಳ ಮೂಲಕ ಮೂಢನಂಬಿಕೆಗಳನ್ನು ಬಿಚ್ಚಿಡುವ, ತೆರೆದಿಡುವ ಕೆಲಸ ಮಾಡಿದ್ದು ಅದು ವಾಸ್ತವಕ್ಕೆ ದೂರವಾಗಿದ್ದು ಅದು ಸುಳ್ಳೆಂದು ಸಾಬೀತು ಪಡಿಸುವುದರ ಮೂಲಕ ಸಮಾಜವನ್ನು ಸತ್ಯತೆಯ ದಿಕ್ಕಿನೆಡೆಗೆ ಒಯ್ಯುವ ಕೆಲಸ ಮಾಡಿದ್ದಾರೆ. 'ಕರಿಮಣ್ಣಿನ ಗೊಂಬೆಗಳು', 'ಕೋಳಿಪಾಲು' ಇನ್ನಿತರ ಕತೆಗಳ ಮೂಲಕ ಮೂಢನಂಬಿಕೆಗಳನ್ನು ಅನಾವರಣಗೊಳಿಸಿದ್ದಾರೆ. 'ಕರಿಮಣ್ಣಿನ ಗೊಂಬೆಗಳು' ಕತೆಯಲ್ಲಿ ಬರುವ ಕಾಡಣ್ಣ ತನ್ನ ಹೊಲವು ಸರಿಯಾಗಿ ಫಲ ಕೊಡಲಿಲ್ಲ ಅಥವಾ ಹಿಪ್ಪು ನೆರಳೆ ಹುಳುಗಳು ಸರಿಯಾದ ಫಲ ನೀಡಲಿಲ್ಲದ್ದಕ್ಕೆ ಕಾಡಣ್ಣ ತನ್ನ ಹಿರಿ ಹೆಂಡತಿಯ ಮೇಲಿನ ಸಂಶಯದಿಂದ ಪೂಜಾರಯ್ಯನ ಹತ್ತಿರ ಶಾಸ್ತ್ರ ಕೇಳಿಸುತ್ತಾನೆ. ಈಗಾಗಲೇ ವಿಚಾರವನ್ನು ತಿಳಿದಿದ್ದ ಪೂಜಾರಯ್ಯ

"ನಿಮ್ಮ ಜಮೀನಿನಲ್ಲಿ ಗೊಂಬೆಗಳ ಮಾಡಿಸಿ ಹೂತವರೆ ಕಣೋ ಕಾಡಯ್ಯ" ಎಂದನು. ತಕ್ಷಣವೇ ತನ್ನ ಹಿರಿ ಹೆಂಡತಿಯ ಮೇಲಿನ ಸಂಶಯ ನಿಜವೆನಿಸಿತು. ಗೊಂಬೆಗಳನ್ನು ಕಿಳಿಸುವ ಪ್ರಯತ್ನ ಮುಂದುವರೆಯಿತು. ಅದರ ಸಂಪೂರ್ಣ ವ್ಯವಸ್ಥೆ ಪೂಜಾರಯ್ಯನದೇ

ಆಗಿತ್ತು. ಕರೀಗೌಡ ಬೀಚನಹಳ್ಳಿಯವರು ಈ ನಂಬಿಕೆಯನ್ನು ಕಾಡಯ್ಯನ ಮಗ 'ಮೂಡ್ಲಿ'ಯಿಂದ ಸತ್ಯ-ಅಸತ್ಯತೆಯನ್ನು ಹೊರ ಬೀಳುವಂತೆ ಚಿತ್ರಿಸಿದ್ದಾರೆ, ಮೂಡ್ಲಿಯ ಜಾಣತನವನ್ನು ಬೀಚನಹಳ್ಳಿಯವರು ಬಳಸಿಕೊಂಡು ಅವನಿಂದಲೇ ತನ್ನ ತಂದೆಯ ಸಂಶಯವನ್ನು ಸುಳ್ಳಾಗಿಸುವವಂತೆ ಮಾಡಿದ್ದಾರೆ. ಬೀಚನಹಳ್ಳಿಯವರು ಸಮಾಜದಲ್ಲಿ ನಡೆಯುವಂತಹ ಸುಳ್ಳು ಗೋಜಿನ ಹಾಗೂ ಅಸತ್ಯತೆಗಳನ್ನು ನಂಬದಿರುವಂತೆ ಈ ಕಥೆಯಲ್ಲಿ ತಿಳುವಳಿಕೆ ನೀಡಿದ್ದಾರೆ. ಇದರಿಂದ ಯಾವುದೇ ಶಾಸ್ತ್ರ, ಪುರಾಣ, ಪೂಜೆ, ವೇದಾಂತ ನಂಬಬಾರದು ಎಂದೇನಿಸುತ್ತದೆ.

'ಕೋಳಿಪಾಲು' ಕಥೆಯಲ್ಲಿಯು ಸಹ 'ಕರಿಮಣ್ಣಿನ ಗೊಂಬೆಗಳು' ಕತೆಯಲ್ಲಿ ಪೂಜಾರಿಯೇ ನಂಬಿಕೆಯನ್ನು ಹುಟ್ಟಿಸಿ ಅದನ್ನು ಮುಂದೂಲು ಪ್ರಯತ್ನಿಸುತ್ತಾನೆ. ಆದರೆ 'ಕೋಳಿಪಾಲು' ಕತೆಯಲ್ಲಿ ಕೋಳಿ ಕಳೆದು ಕೊಂಡ ಚಿನ್ನವ್ವ, 'ಕರಿಮಣ್ಣಿನ ಗೊಂಬೆಗಳು' ಕತೆಯಲ್ಲಿ ಬರುವ ಕಾಡಯ್ಯ ಹೇಗೆ ತನ್ನ ಹಿರಿ ಹೆಂಡತಿಯ ಮೇಲೆ ಸಂಶಯ ಕಟ್ಟಿರುತ್ತಾನೆಯೋ ಈ ಕತೆಯಲ್ಲಿಯೂ ಸಹ (ಕೋಳಿಪಾಲು) 'ಚಿನ್ನವ್ವ' ತನ್ನ ಎದುರು ಮನೆ ಕರಿಯಮ್ಮನ ಮೇಲೆ ಸಂಶಯ ಪಟ್ಟಿರುತ್ತಾಳೆ. 'ಚಿನ್ನವ್ವ' ತನ್ನ ಮನೆ ದೇವತೆ 'ಹಂದಲಗೆರೆಯ ಮಹೇಶ್ವರಮ್ಮ'ನ ಹತ್ತಿರ ಹರಕೆ ಹೊತ್ತು.

**ಚಿನ್ನವ್ವ** "ತನ್ನ ಮನೆಯ ಕೋಳಿಯ ಮುರಿದು ಕೊಂಡವರ ಮನೆಯ ಹಾಳು ಮಾಡಿದರೆ ತಾನು ಊರಿಗೆ ಹೋಗುವ ಹೊತ್ತಿಗೆ ಅವರ ಮನೆಯಲ್ಲಿ ಹೆಣಬೀಳಂದರೆ ವರ್ಷಕ್ಕೆ ಸರಿಯಾಗಿ ತಾನು ಬಂದು ಒಂದು ಮೂಗುತಿಯನ್ನು ಮಾಡಿಸಿಕೊಡುವುದಾಗಿ ಬೇಡಿಕೊಂಡಳು"*

**ಪೂಜಾರಯ್ಯ** "ಹೋಗೇ ಮಗಳೇ ನೀನು ಊರಿಗೆ ಹೋಗುದರೊಳಗೆ ಅವರ ಮನೆಯಲ್ಲಿ ಮುಂದಲ ಮಗನ ಹೆಣ ಬೀಳದೆ ಇದ್ದರೆ ನನ್ನ ಹೆಸರು ಹಿಡಿದು ಕರಿಬೇಡ, ನಿಮ್ಮವ್ವನ ದರ್ಶನಕ್ಕೆ ಮತ್ತೇ ನೀ ಬರಬೇಡ"* ಎಂದನು.

ಬೀಚನಹಳ್ಳಿಯವರು ಒಂದು ಗೊಂಬೆ ಒಂದು ಕೋಳಿಯನ್ನಿಟ್ಟುಕೊಂಡು ಮೂಢನಂಬಿಕೆ ಸಂಪ್ರದಾಯಗಳನ್ನು ನಂಬಬಾರದು. ನಂಬಿದರೆ ಅದರಿಂದಾಗುವ ಪರಿಣಾಮವೇನೆಂಬುದನ್ನು ಕೋಳಿಪಾಲು ಕತೆಯಲ್ಲಿ ತಿಳಿಸಿಕೊಡಲಾಗಿದೆ. ಬೀಚನಹಳ್ಳಿಯವರು ಕೋಳಿ ತಿಂದ ಕರಡಯ್ಯನಿಂದ ಸತ್ಯ ಹೇಳಿಸುವುದರ ಮೂಲಕ ಪೂಜೆ, ದೇವರು ಸಂಪ್ರದಾಯ ಯಾವುದನ್ನು ನಂಬಬಾರದು ಅವುಗಳು ಏನಿದ್ದರೂ ತಾತ್ಕಾಲಿಕ. ನೆಮ್ಮದಿಗೊಸ್ಕರ ಎಂಬುದುನ್ನು ಇಲ್ಲಿ ಸೂಕ್ಷ್ಮವಾಗಿ ತಿಳಿಸಿಕೊಡುವ ಪ್ರಯತ್ನ ಮಾಡಿದ್ದಾರೆ. ಇದರಿಂದ ಸಮಾಜ (ಗ್ರಾಮ-ನಗರ) ಎಚ್ಚೆತ್ತುಕೊಳ್ಳಲು ಮುಂದಾಗಬಹುದು.

**೩.೬.೨. ಸಂಸ್ಕಾರಗಳು:**

ಪ್ರತಿಯೊಂದು ಸಮಾಜವು ತನ್ನದೇ ಆದ ಸಂಸ್ಕೃತಿಯನ್ನು ಆದರಿಸಿ ವ್ಯಕ್ತಿತ್ವವನ್ನು ಸೂಕ್ತವಾದ ರೀತಿಯಲ್ಲಿ ರೂಪಿಸುವ ವ್ಯವಸ್ಥೆ ಮಾಡಿಕೊಂಡಿರುವುದನ್ನು ಇಡೀ ಜಗತ್ತಿನಾದ್ಯಂತ

ಗುರುತಿಸಬಹುದಾಗಿದೆ. ವ್ಯಕ್ತಿತ್ವವನ್ನು ರೂಪಿಸಲು ನೆರವಾಗುವ ಆ ಬಗೆಯ ಪ್ರಯತ್ನಗಳು ಹಾಗೂ ವ್ಯವಸ್ಥೆ ವಿಧಾನಗಳನ್ನು "ಸಂಸ್ಕಾರಗಳು" ಎನ್ನುತ್ತೇವೆ. ಅಂತಹ ಸಂಸ್ಕಾರಗಳು ಗ್ರಾಮೀಣ ಜೀವನದಲ್ಲಿ ಹಾಸು ಹೊಕ್ಕಾಗಿವೆ. ಸಂಸ್ಕಾರ ಎಂದರೆ ಪರಿಶುದ್ಧಗೊಳ್ಳುವುದು ಎಂದರ್ಥ. 'ಮನುವಿನ ಪ್ರಕಾರ' ಸಂಸ್ಕಾರಗಳು ದೇಹವನ್ನು ಪರಿಶುದ್ಧಗೊಳಿಸುವುವು. ಪ್ರತಿಯೊಂದು ಸಂಸ್ಕಾರವು ಹೋಮ ಇಲ್ಲವೇ ಯಜ್ಞದಿಂದ ಆರಂಭವಾಗುತ್ತದೆ. ಸಂಸ್ಕಾರ ಎಂಬ ಪದವು ಸ್ವಂತ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವುದನ್ನು ಧಾರ್ಮಿಕ ಕಾರ್ಯ ಇಲ್ಲವೇ ಕ್ರಿಯಾ ವಿಧಿಯನ್ನು ಆಚರಿಸುವುದನ್ನು ಸೂಚಿಸುತ್ತದೆ ಎಂಬ ವಿವಿಧ ಬಗೆಯ ಅಭಿಪ್ರಾಯಗಳಿದ್ದರೂ ಸಂಸ್ಕಾರವು ತುಂಬಾ ವಿಶಾಲ ಅರ್ಥವುಳ್ಳದ್ದಾಗಿರುವುದು. ವ್ಯಕ್ತಿಯ ವರ್ತನೆ ಹಾಗೂ ನಡವಳಿಕೆಯನ್ನು ಗಮನಿಸಿ ತುಂಬಾ ಸಂಸ್ಕಾರಗೊಂಡಿರುವ ವ್ಯಕ್ತಿತ್ವ ಇಲ್ಲವೇ ಇನ್ನೂ ಸಂಸ್ಕಾರಗೊಳ್ಳಬೇಕಾಗಿರುವ ವ್ಯಕ್ತಿತ್ವ ಎಂಬುದಾಗಿ ಗುರುತಿಸಬಹುದಾದ ಸಾಧ್ಯತೆ ಇರುತ್ತದೆ. ಹಿಂದೂ ಧರ್ಮದಲ್ಲಿ ಅನೇಕ ಸಂಸ್ಕಾರಗಳು ಆಚರಣೆಯಲ್ಲಿವೆ.

ಡಾ. ಕರೀಗೌಡ ಬೀಚನಹಳ್ಳಿ ಅವರು ತಮ್ಮ ಕತೆಗಳಲ್ಲಿ ಹಿಂದೂ ಧರ್ಮಕ್ಕೆ ಸಂಬಂಧಿಸಿದ ಕೆಲವು ಸಂಸ್ಕಾರಗಳನ್ನು ಪರಿಚಯಿಸಲು ಪ್ರಯತ್ನಿಸಿದ್ದಾರೆ. ಧರ್ಮಕ್ಕೆ ಸಂಬಂಧಿಸಿದ ದೇವಾಲಯಗಳಲ್ಲಿ ಪೂಜೆಗಳನ್ನು ಮಾಡುವುದು, ಹರಕೆ ಹೊತ್ತುಕೊಳ್ಳುವುದು ಇನ್ನಿತರ ಅಂಶಗಳನ್ನು ಗುರುತಿಸಿದ್ದಾರೆ. ಸಂಸ್ಕಾರದ ಕೊನೆಯ ಹಂತದಲ್ಲಿ ಬರುವ ಬಹುಮುಖ್ಯವಾದದ್ದು ಎಂದರೆ ಶವ ಸಂಸ್ಕಾರ ಹಾಗೂ ತಿಥಿ ಮಾಡುವುದು.

**ಶವ ಸಂಸ್ಕಾರ ಹಾಗೂ ತಿಥಿ:**

ಭಾರತೀಯ ಹಿಂದೂ ಸಂಪ್ರದಾಯಗಳಲ್ಲಿ ಶವ ಸಂಸ್ಕಾರ ಹಾಗೂ ತಿಥಿಯು ಬಹಳ ಮಹತ್ವವಾದದ್ದು. ಮಾನವ ಜನ್ಮಕ್ಕೆ ಮುಕ್ತಿ–ಮೋಕ್ಷ ಸಿಗುವುದು ತಿಥಿಯಿಂದಲೇ ಜೀವನದ ಕೊನೆಯ ಘಟ್ಟವೆಂದರೆ ತಪ್ಪಾಗಲಾರದು. ಕೊನೆಯಾಗಲಿರುವ ಈ ಘಟ್ಟವನ್ನು ಕರೀಗೌಡ ಬೀಚನಹಳ್ಳಿ ಅವರು ತಮ್ಮ ಕತೆಗಳಲ್ಲಿ ಪದೇ ಪದೇ ನೆನಪಿಸಿಕೊಡುವ ಕೆಲಸ ಮಾಡಿದ್ದಾರೆ. ಜೊತೆಗೆ ಭೌಗೋಳಿಕತೆಗೆ ಸಂಬಂಧಿಸಿದಂತೆ ಶವ ಸಂಸ್ಕಾರಗಳು, ತಿಥಿಗಳು ವಿಭಿನ್ನತೆಯಿಂದ ಕೂಡಿರುತ್ತವೆ. ಎಂಬುದನ್ನು ಸಹ ಗುರುತಿಸಿ ಕೊಟ್ಟಿದ್ದಾರೆ. ಶವ ಎಂದಾಕ್ಷಣ ಹೆಣ್ಣು, ಗಂಡು ಅದರಲ್ಲಿ ಗರ್ಭಿಣಿಯರನ್ನು ಹೇಗೆ ಸಂಸ್ಕಾರ ಮಾಡುತ್ತಾರೆ. ವಯಸ್ಸಾದವರನ್ನು ಹೇಗೆ ಮಾಡುತ್ತಾರೆ ಅವರ ತಿಥಿಗಳನ್ನು ಹೇಗೆ ಮಾಡುತ್ತಾರೆ ಎಂಬುದನ್ನು ತಿಳಿಸಿದ್ದಾರೆ.

ಬೀಚನಹಳ್ಳಿ ಅವರ ಕತೆಗಳನ್ನು ನಿದರ್ಶನವಾಗಿ ನೋಡುವುದಾದರೆ 'ಅರಣ್ಯ' ಕತೆಯಲ್ಲಿ 'ಚೆನ್ನಿ'ಯ ಸಾವು 'ಒಡಲಕವಕ' ಕತೆಯಲ್ಲಿ 'ಭಾಗ್ಯ'ಳ ಸಾವು 'ಆಸಕ್ತಿ' ಕತೆಯಲ್ಲಿ 'ಗಂಗಣ್ಣ'ನ ಸಾವು, 'ಜೊತೆಗಾತಿ' ಕತೆಯಲ್ಲಿ ಕೊನೆಯಲ್ಲಿ ಕೊನೆಯುಸಿರೆಳೆಯುವ 'ಕೃಷ್ಣಪ್ಪ', 'ಅವಮಾನ' ಕತೆಯಲ್ಲಿ ಈಗಾಗಲೇ ಸಾವನ್ನಪ್ಪಿದ 'ಕರಿಸಿದ್ದೇಗೌಡ', 'ಗೌರಿ' ಕತೆಯಲ್ಲಿ ಕಾಣದಂತೆ ಮಾಯವಾಗುವ 'ಬೊಂಡದ ಗುಂಡಮ್ಮ', 'ಒಂದು ಬೆಳದಿಂಗಳ ರಾತ್ರಿ' ಕತೆಯಲ್ಲಿ ದ್ವೇಷದ ಬಲೆಗೆ ಸಿಲುಕಿ ಅಮಾಯಕನಂತೆ ಸಾವನ್ನಪ್ಪುವ ರಶೀದ್ ಹೀಗೆ ಈ ಏಳು ಕತೆಗಳಲ್ಲಿ

ಬೀಚನಹಳ್ಳಿಯವರು ಸಾವು ನೋವುಗಳನ್ನು ಜೊತೆಗೆ ತಿಥಿಯನ್ನು ಕೆಲವು ಕತೆಗಳಲ್ಲಿ ಚಿತ್ರಿಸಿದ್ದಾರೆ.

ಶವ ಸಂಸ್ಕಾರವನ್ನು ಜಾತಿ ಜನಾಂಗಕ್ಕೆ ಸಂಬಂಧಿಸಿದಂತೆ ಮಾಡುತ್ತಾರೆ. ಬೀಚನಹಳ್ಳಿ ಅವರು ತಮ್ಮ ಸ್ಥಳೀಯ ಅನುಭವಗಳನ್ನು ಇಟ್ಟುಕೊಂಡು ಕತೆಗಳಲ್ಲಿ ತಮ್ಮ ಸುತ್ತ ಮುತ್ತಲಿನ ಶವ ಸಂಸ್ಕಾರದ ಬಗ್ಗೆ ತಿಳಿಸಿದ್ದಾರೆ. ಅದರಲ್ಲಿ ಬೆಂಗಳೂರು, ತುಮಕೂರು, ಚಿತ್ರದುರ್ಗ ಈ ಮೂರು ಜಿಲ್ಲೆಗಳ ಶವ ಹಾಗೂ ತಿಥಿಯ ವಿಧಾನವನ್ನು ಹಿಡಿದಿಡಲು ಪ್ರಯತ್ನಿಸಿದ್ದಾರೆ. 'ಅರಣ್ಯ' ಕತೆಯಲ್ಲಿ 'ಚೆನ್ನಿ'ಯ ಹೆಣವನ್ನು (ಗರ್ಭಿಣಿ) ಗೋಣಿಚೀಲದಲ್ಲಿ ಹಾಕಿಕೊಂಡು ಹೋಗಿ ಊರಿನ ಹಿಂದಿನ ಸಂಪ್ರದಾಯದ ಪ್ರಕಾರವಾಗಿ ನವುಲುಕಲ್ಲು ಗುಡ್ಡದ ಬಳಿ ಕುಳ್ಳರಿಸಿ ಬರುತ್ತಾರೆ. ಇದರ ಉದ್ದೇಶ ಆಕೆಯು ದೇವ್ವ, ಪೀಡೆ, ಪಿಶಾಚಿಯಾಗಿ ಕಾಡಬಾರದು ಎಂಬುದರಿಂದ ಈ ರೀತಿಯಾಗಿ ಕುಳ್ಳರಿಸಿರಬಹುದು. ಆಕೆಯ ತಾಯಿಯು ಚೆನ್ನಿಯ ತಿಥಿಯನ್ನು ಚೆನ್ನಿ ಸತ್ತ ೧೬ನೇ ದಿನಕ್ಕೆ ಮಾಡಿ ಮುಗಿಸುತ್ತಾಳೆ. ಇದರಿಂದ ಶವ ಸಂಸ್ಕಾರದ ಎಷ್ಟನೇ ದಿನಕ್ಕೆ ತಿಥೀ ಮಾಡುತ್ತಾರೆ ಎಂಬುದನ್ನು ಈ ಮೂಲಕ ಬೀಚನಹಳ್ಳಿ ತಿಳಿಸಿಕೊಟ್ಟಿದ್ದಾರೆ.

ಬೀಚನಹಳ್ಳಿಯವರು ಈಗಾಗಲೇ ಕಥೆಯ ಪ್ರಾರಂಭದಲ್ಲಿ ಸಾವನ್ನಪ್ಪಿದ ಕೆಲವು ಕಥೆಗಳನ್ನು ಗುರುತಿಸಿದ್ದಾರೆ. ಅವುಗಳ ತಿಥಿಯನ್ನು ಕೆಲವು ದಿನಗಳ ನಂತರ ಮಾಡುತ್ತಾರೆ. ತಿಥಿಗೆ ಯಾವರೀತಿಯ ಊಟವನ್ನು ಮಾಡುತ್ತಾರೆ ಎಂಬುದನ್ನು ಸಹ ತಿಳಿಸಿದ್ದಾರೆ. 'ಆಸಕ್ತಿ' ಕತೆಯಲ್ಲಿ ಗಂಗಣ್ಣನ ತಿಥಿಗಾಗಿ ಹಪ್ಪಳ, ಉಪ್ಪಿನ ಕಾಯಿ, ಸಂಡಿಗೆ, ಕಜ್ಜಾಯ, ಒಡೆ, ಒಬ್ಬಟ್ಟು ಮಾಡಿದರೆ ಅವಮಾನ ಕತೆಯಲ್ಲಿ 'ಕುರಿಸಿದ್ದೇಗೌಡ'ನ ತಿಥಿಗಾಗಿ ಬಾಡ್ನೂಟ (ಮಾಂಸದೂಟ) ಮಾಡಿಸುತ್ತಾರೆ. ಇದರಿಂದ ನಮಗೆ ತಿಳಿದು ಬರುವುದೇನೆಂದರೆ ಸಾವನ್ನಪ್ಪಿದವರ ತಿಥಿಯನ್ನು ಮಾಡುವ ಸಂದರ್ಭದಲ್ಲಿ ತಯಾರಿಸುವಂತಹ ಆಹಾರದ ವಿಧಾನಗಳಾವುವು ಎಂಬುದು ತಿಳಿಯುತ್ತದೆ. ಅಂದರೆ ತಿಥಿಗೆ ಸಸ್ಯಹಾರವನ್ನು ಮಾಡುತ್ತಾರೆ. ಮಾಂಸಾಹಾರವನ್ನು ಮಾಡುತ್ತಾರೆ. ಎಂಬುದು ತಿಳಿದು ಬರುತ್ತದೆ.

### ೩.೬.೩. ಬಡತನ ಹಾಗೂ ಶಿಕ್ಷಣ:

ಡಾ. ಕರೀಗೌಡ ಬೀಚನಹಳ್ಳಿ ಅವರು ತಮ್ಮ ಕತೆಗಳಲ್ಲಿ ಮನುಷ್ಯ ಸಂಬಂಧಗಳು ಕುಟುಂಬ ಸಂಬಂಧಗಳು, ಸಮುದಾಯ ಸಂಬಂಧಗಳು, ಗ್ರಾಮೀಣ ಸಂಪ್ರದಾಯಗಳನ್ನು ಹೇಗೆ ಚಿತ್ರಿಸಿದ್ದಾರೋ ಅದೇ ರೀತಿಯಾಗಿ ಕತೆಗಳಲ್ಲಿ ಬಡತನ, ಶಿಕ್ಷಣ, ಗ್ರಾಮ ಸಮಾಜ ಬದಲಾವಣೆ ಹೊಂದುವುದು, ಹಳ್ಳಿಗಳ ನಗರೀಕರಣ ಮುಂತಾದ ಅಂಶಗಳನ್ನು ಗುರುಸಿದ್ದಾರೆ. ಬೀಚನಹಳ್ಳಿ ಅವರು ಪ್ರಮುಖವಾಗಿ ಬಡತನ ಹೇಗೆ ಶಿಕ್ಷಣಕ್ಕೆ ಅಡ್ಡಿಯುಂಟು ಮಾಡುತ್ತಿದೆ, ಅಡ್ಡಿಯುಂಟು ಮಾಡುವಂತಹ ವಸ್ತು ಯಾವುದು ಎಂಬುದನ್ನು ಗುರುತಿಸಿದ್ದಾರೆ. ಒಂದೇ ಒಂದು ಚಿಕ್ಕ ವಸ್ತು ಯಾವ ರೀತಿಯ ಅಡ್ಡಿಯನ್ನು ಉಂಟುಮಾಡುತ್ತದೆ ಎಂಬುದನ್ನು

ಕತೆಗಳಲ್ಲಿ ಅತ್ಯಂತ ಸೂಕ್ಷ್ಮವಾಗಿ ತಿಳಿಸಿದ್ದಾರೆ. ಜೊತೆಗೆ ಕಾಲ ಬದಲಾದಂತೆ ಜನತೆಯು ಬದಲಾಗುತ್ತಾರೆ ಎಂಬುದು ನಿಸರ್ಗದ ಸಹಜ ಗುಣವಾಗಿದೆ. ಹಾಗೆಯೇ ವಿದ್ಯೆಯನ್ನು ಕಲಿಯಲು ಹಾತೋರೆಯುವ ಮುದ್ದು ಮಕ್ಕಳು, ಕತೆಗಳಲ್ಲಿ ವಿಭಿನ್ನ ರೀತಿಯಲ್ಲಿ ಕಷ್ಟಗಳನ್ನು ಅನುಭವಿಸುತ್ತಾರೆ, ಅಂದರೆ ಇಂದಿನ ಹಳ್ಳಿಗಾಡಿನ ಜನತೆಯಲ್ಲಿಯು ಸಹ ಇಂತಹ ಚಿಕ್ಕ-ಚಿಕ್ಕ ವಸ್ತುಗಳ ಸಮಸ್ಯೆಯಿಂದ, ಬಡತನದಿಂದ ಶಿಕ್ಷಣ ಕಲಿಯಲು ವಂಚಿತರಾಗುತ್ತಿದ್ದಾರೆ, ಎಂಬುದನ್ನು ಮನವರಿಕೆ ಮಾಡಿಕೊಳ್ಳಬೇಕು.

'ಒಂದು ಅಪೂರ್ವ ಸಂಸಾರ', 'ಕಳಕಳಿ', 'ದನಿ', 'ಸಂಗಾತಿಗಳು', 'ಕಲ್ಯಾಣಿ', 'ನೆನಪಲ್ಲಿ ವಾಸ್ತವ' ಹಂದಿಲಕ್ಕವ್ವ, 'ಹಕ್ಕಿಬೆಂದು ಹಕ್ಕಿಯರಿಬೆಂದೊ' ಇತ್ಯಾದಿ ಕಥೆಗಳಲ್ಲಿ ಬಡತನ-ಶಿಕ್ಷಣ, ಬದಲಾವಣೆ ಹೊಂದುತ್ತಿರುವ ಗ್ರಾಮೀಣ ಜನತೆ ಮುಂತಾದ ಅಂಶಗಳನ್ನು ಕುರಿತು ಅತ್ಯಂತ ವಿಭಿನ್ನ ರೀತಿಯಲ್ಲಿ ಅತೀ ಸೂಕ್ಷ್ಮವಾಗಿ ಮನವರಿಕೆಯಾಗುವಂತೆ ತಿಳಿಸಿಕೊಟ್ಟಿದ್ದಾರೆ.

'ಒಂದು ಅಪೂರ್ವ ಸಂಸಾರ' ಕಥೆಯು ಪ್ರಾರಂಭದಿಂದಲೇ ಬಡತನವನ್ನು ಹೊರಹೊಮ್ಮುತ್ತಾ ಹೋಗುತ್ತದೆ. ತಂದೆ-ಮೀನು ಹಿಡಿಯುವುದು ತಾಯಿ-ಪೊಲೀಸ ಪೆದೆಯಲ್ಲಿ ಅಡಿಗೆಯವಳಾಗಿ ಕೆಲಸ ನೋಡಿಕೊಳ್ಳುವುದು. ಅಲ್ಲಿಂದ ರಾತ್ರಿಯ ಹಳಸಿದ ಅನ್ನವನ್ನು ತೆಗೆದುಕೊಂಡು ಬಂದು ಮಕ್ಕಳಿಗೆ ಹಳಸಿಲ್ಲ ಎಂದು ಬಡಿಸುವುದು ಮಕ್ಕಳು ಸೈಕಲ್ ಶಾಪಿನಲ್ಲಿ ಕೆಲಸಕ್ಕಿರುವುದು, ಇವೇಲ್ಲ ಬಡತನವನ್ನು ಕಿತ್ತು ತಿನ್ನುತ್ತಿರುವ ಸೂಕ್ಷ್ಮತೆಗಳು ವಲಿಸಿಗ ಮುಸ್ಲಿಂ ಕುಟುಂಬವೊಂದು ನಿತ್ಯ ದುಡಿದರೂ ಹೊಟ್ಟೆ ತುಂಬಿಸಿಕೊಳ್ಳಲಾಗದೆ ಪರದಾಡುತ್ತವೇ, 'ಪಿತೃಪಕ್ಷದ' ನಿಮಿತ್ತ ಹಬ್ಬಮಾಡಿ ಹೊಟ್ಟೆ ತುಂಬ ಉಣ್ಣಬೇಕೆಂಬ ಬಯಕೆ ಕೈಗೂಡದೆ ಹೋಗುತ್ತದೆ. 'ಸಾಬುಲಾಲು' ಹಬ್ಬದ ಸಲುವಾಗಿ ಒಂದಷ್ಟು ಸಂಪಾದಿಸಿಕೊಂಡು ಬರಲು ದಿನವಿಡಿ ಹೆಣಗಿದರೂ ಸಾಧ್ಯವಾಗುವುದಿಲ್ಲ. ಮಕ್ಕಳಾದ 'ಅತ್ತರ' 'ಅಜೀದು' ದುಡಿದ ಫಲ ಪಡೆಯಲೂ ವಿಫಲರಾಗುತ್ತಾರೆ. ತಾಯಿ 'ಮಮ್ತಾಜ್' ಬೂಬಮ್ಮ ಹಬ್ಬಕ್ಕೆ ಅಡಿಗೆ ಮಾಡಲು ಎಷ್ಟು ಹೆಣಗಿದರೂ ಸಾಧ್ಯವಾಗದ ಎಲ್ಲರ ಮೇಲೆ ಕೋಪಿಸಿಕೊಳ್ಳುವುದೊಂದೇ ಆಗುತ್ತದೆ. ತಾಯಿಯ ಕೋಪಕ್ಕೆ ಬೇಸತ್ತ ಮಗಳು ಗುಡಿಸಲಿನಿಂದ ಹೊರ ಹೋಗುತ್ತಾಳೆ. ಎಲ್ಲ ದಂದುಗ ಮರೆತು ತಂದೆ ಮಗಳ ಹುಡುಕಾಟಕ್ಕೆ ಹೊರ ನಡೆಯುತ್ತಾನೆ. ಕತೆಯ ಧ್ವನಿ ಇಲ್ಲಿ ವ್ಯಕ್ತವಾಗುತ್ತದೆ. ಅಂದರೆ ಮನೆಯಲ್ಲಿ ಮೌನ ಆವರಿಸಿದರೂ ಯಾವುದೇ ರೀತಿಯ ಫಲ ದೊರಕುತ್ತಿಲ್ಲ ಎಂಬುದು. ಬೀಚನಹಳ್ಳಿ ಅವರು ಇಂತಹ ಅನುಭವ ಪಡೆದಿರಬಹುದು ಎಂದೆನಿಸುತ್ತದೆ. ಬಡತನ ಎನ್ನುವುದು ಮನುಷ್ಯನನ್ನು ಯಾವ ದಿಕ್ಕಿಗಾದರೂ ಒಯ್ಯುತ್ತದೆ.

'ಕಳಕಳಿ ಕಥೆಯಲ್ಲಿ ಬೀಚನಹಳ್ಳಿ ಅವರು ಬಡತನವು-ಶಿಕ್ಷಣಕ್ಕೆ ಹೇಗೆ ಅಡ್ಡಿಯನ್ನುಂಟು ಮಾಡುತ್ತದೆ ಎಂಬುದನ್ನು ಬಿಚ್ಚಿಟ್ಟಿದ್ದಾರೆ. ಬದಲಾವಣೆ ಹೊಂದುತ್ತಿರುವಂತೆ ಮಕ್ಕಳ ಮನಸ್ಥಿತಿಯು ಬದಲಾಗುತ್ತದೆ. ಇಲ್ಲಿ ರಾಮಣ್ಣನಿಗೆ ಓದಬೇಕು, ನಾನು ನಾಳೆಯ ಪರೀಕ್ಷೆಯಲ್ಲಿ ಪಾಸಾಗಬೇಕು ಎಂಬ ತವಕವಿರುತ್ತದೆ. ಈ ತವಕದ ಹಿನ್ನೆಲೆಯಲ್ಲಿ ಬೀಚನಹಳ್ಳಿಯವರು

ಬಡತನವನ್ನು ಕಟ್ಟಿಕೊಟ್ಟಿದ್ದಾರೆ. 'ಬೆಂಕಿಕಡ್ಡಿ' ಒಂದು ಚಿಕ್ಕ ವಸ್ತುವಾದರೂ ಅದರ ಪರಿಣಾಮ ಅಸಾಧ್ಯವಾದದ್ದು. 'ರಾಮಣ್ಣ' ಬೆಂಕಿಕಡ್ಡಿಗೋಸ್ಕರ ಕತ್ತಲಲ್ಲಿಯೇ ಮನೆಯನ್ನೆಲ್ಲಾ ಹುಡುಕುತ್ತಾನೆ ಸಿಗುವುದಿಲ್ಲ. ನಂತರ ಕಾಳಣ್ಣನನ್ನು ಜ್ಞಾಪಿಸಿಕೊಂಡು ಹೋಗಿ ಬೆಂಕಿಕಡ್ಡಿ ತರುವುದರೊಳಗೆ ಬೆಳಕಾಗುತ್ತದೆ. ಓದುವ ಸಮಯ ಮುಕ್ತಾಯವಾಗುತ್ತದೆ. ಅಂದರೆ ಜೀವನವೇ ಮುಕ್ತಾಯವಾದಂತೆ ಎಂದು ತಿಳಿಯಬಹುದು. ರಾತ್ರಿ ರಾಮಣ್ಣನಿಗೆ ದೀಪವಿಲ್ಲದೆ ಇರುವುದರಿಂದ ವೈದಾಟ ಶುರುವಾಗಿತ್ತು. ಬೆಳಕಾದ ಮೇಲೆ ಬರೆಯಲು ಪೆನ್ನಿನ ಸಮಸ್ಯೆ ಉದ್ಭವವಾಗುತ್ತದೆ. ಇಂದಿನ ಕಾಲದಲ್ಲಿ ಶಾಲೆಗೆ ಹೋಗುವಾಗ ಕೊಡಸಿದಂತಹ ಪೆನ್ನನ್ನು ಮಕ್ಕಳು ಸಂಜೆ ಬರುವಾಗ ಕಳೆದುಕೊಂಡು ಬರುತ್ತಾರೆ. ಅದಕ್ಕೆ ಮತ್ತೊಂದು ಕೊಡಿಸುತ್ತಾರೆ. ಆದರೆ ಕಾಮಣ್ಣನ ತಂದೆ ಒಂದುವರೆ ವರ್ಷದ ಕೆಳಗೆ ಕೊಡಿಸಿದ ಪೆನ್ನು ಎಲ್ಲಿ? ಎಂದು ರಾಮಣ್ಣನನ್ನು ಕೇಳುತ್ತಾನೆ. ನೋಡಿ 'ಒಂದುವರೆ ವರ್ಷ' ಎಂಬುದು ಕಾಲದ ಮಹತ್ವವನ್ನು ಗುರುತಿಸಬೇಕೋ? ಪೆನ್ನಿನ ಮಹತ್ವವನ್ನು ಗುರುತಿಸಬೇಕೋ? ಅಥವಾ ಮನೆತನದ ಬಡತನವನ್ನು ಪರೀಕ್ಷಿಬೇಕೋ? ಎಂಬುದು ಸಮಸ್ಯೆಯಾಗಿ ಕಾಡಿದರೂ ಸಹ ಇಲ್ಲಿ ಬಡತನ ಎದ್ದು ಕಾಣುವುದನ್ನು ಗುರುತಿಸಬೇಕು. ಈ ಕಥೆಯು ಪ್ರಮುಖವಾಗಿ ಬಡತನ ಅದರಿಂದ ಉಂಟಾದ ಸಂಕಟ, ವೈದಾಟ, ತುಮುಲತೆ ಅಲ್ಲದೆ ಓದಬೇಕು, ಬರೆಯಬೇಕು ಎಂಬ ಛಲವನ್ನು ಮನವರಿಕೆ ಮಾಡಿಕೊಡುತ್ತದೆ.

ಬಡತನ ಶಿಕ್ಷಣಕ್ಕೆ ಅಡ್ಡಿಯನ್ನುಂಟು ಮಾಡುತ್ತದೆ. ಮನೆಯಲ್ಲಿ ಹುಟ್ಟಿದ ಮಕ್ಕಳನ್ನು ಶಾಲೆಗೆ ಸೇರಿಸಿ ಅವರಿಗೆ ಪುಸ್ತಕ, ಪೆನ್ನು, ಬಟ್ಟೆ, ಫೀಜು ಕೊಟ್ಟು ಕಳಿಸುವುದು ತುಂಬಾ ಕಷ್ಟದ ಸಂಗತಿ. ಹುಟ್ಟಿದ ಮಕ್ಕಳು ದುಡಿದರೆ ಒಂದೋಪ್ಪತ್ತಿಗೆ ಊಟಕ್ಕೆ ಆಗುತ್ತದೆ ಎಂದು ತಿಳಿದು ಶಾಲೆಗೆ ಕಳಿಸದೇ ಕೆಲಸಕ್ಕೆ ಕಳಿಸುವ ತಂದೆ-ತಾಯಿಗಳು ಬಹಳ ಮಂದಿ ಇದ್ದಾರೆ. ಬೀಚನಹಳ್ಳಿ ಅವರು ಸಹ 'ದನಿ' ಕಥೆಯಲ್ಲಿ ಈ ಅಂಶವನ್ನು ಗುರುತಿಸುತ್ತಾರೆ. 'ಕೆಂಚವ್ವ' ಮೂರು ಹೆಣ್ಣು ಮಕ್ಕಳನ್ನು ಹೆತ್ತವಳು. 'ನಾಗಿ', 'ಗೌರಿ', 'ರಾಜಿ'. ನಾಗಿ ಶಾಲೆಗೆ ಹೋಗಲು ಅರ್ಹಳಾದವಳು. ನಾಗಿಗೆ ಓದಬೇಕೆಂಬ ಆಸೆ ಆದರೆ ಮನೆಯಲ್ಲಿ ಬಡತನ ಕಿತ್ತು ತಿನ್ನುತ್ತದೆ. ಇದರಿಂದ 'ಕೆಂಚವ್ವ' "ಹೆಣ್ಣು ಮಕ್ಕಳು ಎಷ್ಟೋದಿದ್ರು ಒಲೆಬೂದಿ ಎತ್ತೋದು ತಪ್ಪೋದಿಲ್ವಂತೆ"* ಅಂದರೆ ಕೆಲವು ಕಡೆ ಇಂತಹ ನಂಬಿಕೆಯನ್ನು ಉಳಿಸಿ, ಮೈಗೂಡಿಸಿಕೊಂಡು ಬಂದಿದ್ದಾರೆ ಎಂಬುದು ತಿಳಿದು ಬರುತ್ತದೆ. 'ಕೆಂಚವ್ವ'ನ ಮಾತನ್ನು ಸ್ವಲ್ಪ ವಿಸ್ತರಿಸುವುದಾದರೆ ಇಂದಿನ ದಿನಗಳಲ್ಲಿ ಹೆಣ್ಣು ಮಕ್ಕಳನ್ನು ಓದಿಸಿ ಆಕೆಗೆ ಕೆಲಸ ಕೊಡಿಸಿದರೆ ಅದರ ಫಲ ಉಣ್ಣುವವರು ಗಂಡನ ಮನೆಯವರೇ ಹೊರತು ಸಾಕಿ ಸಲುಹಿದ ತಂದೆ-ತಾಯಿಗಳಲ್ಲ. ಎಷ್ಟು ಓದಿದರೂ ಸಹ ಆಕೆಗೆ ವರದಕ್ಷಿಣೆ ಕೊಡುವುದು ತಪ್ಪುವುದಿಲ್ಲ. ಬೇರೊಬ್ಬರ ಮನೆಗೆ ಮದುವೆ ಮಾಡಿಕೊಡುವುದು ತಪ್ಪುವುದಿಲ್ಲ. ಇದರಿಂದ ಕೆಂಚವ್ವನ ಮಾತು ಅರ್ಥವತ್ತಾಗಿದೆ ಎಂದು ಹೇಳಬಹುದು.

ಬಡತನದ ಬೇಗೆಯಿಂದ ಬಳಲುತ್ತಿರುವವರಿಗೆ ಸಹಾಯ ಮಾಡುತ್ತಾರೆ ಎಂಬ ಸಂಗತಿಯು 'ಸಂಗಾತಿಗಳು' ಕಥೆಯಿಂದ ಮನವರಿಕೆಯಾಗುತ್ತದೆ. ಸಂಗಾತಿಗಳು ಕಥೆಯಲ್ಲಿ ಬರುವ ಆಸ್ತಿಪಾಳ್ಯದ ಚೆನ್ನಯ್ಯನಿಗೂ–ಅಬ್ದುಲ್ ಅಜೀಜ್‌ಸಾಬ್‌ರ ನಡುವಿನ ಸ್ನೇಹತ್ವವು ಸಹಾಯಕ್ಕೆ ಕಾರಣವಾಗುತ್ತದೆ. ಗೆಳೆತನ, ಒಳ್ಳೆಯ ಮಾತು, ಪ್ರಮಾಣಿಕತೆ ನಮ್ಮನ್ನು ಕೈಬಿಡುವುದಿಲ್ಲ ಎಂಬುದಕ್ಕೆ 'ಅಬ್ದುಲ್ ಅಜೀಜ್‌ನೇ ಉತ್ತಮ ನಿದರ್ಶನ. ಇಂದಿನ ದಿನಗಳಲ್ಲಿ ಓದಲು, ಬರೆಯಲು ಅನುಕೂಲ ಮಾಡಿಕೊಟ್ಟಿದ್ದಾರೆ. ಆದರೆ 'ಚೆನ್ನಯ್ಯನ ಗೆಳೆತನದಿಂದ ಆತನ ಒಳ್ಳೆಯ ಗುಣ ಸ್ವಭಾವದಿಂದ ಆತನ ಮಗನನ್ನು ಅಬ್ದುಲ್ ಅಜೀಜ್ ಹತ್ತನೆಯ ತರಗತಿಯ ತನಕ ಓದಿಸಿದ್ದಲ್ಲದೇ ಮುಂದೆಯು ಓದಿಸುತ್ತೇನೆ ಎನ್ನುವ ಮಟ್ಟಕ್ಕೆ ಬರುತ್ತಾನೆ. ಬಡತನ ಎನ್ನುವುದು ಮತ್ತೊಬ್ಬರನ್ನು ಕಾಲು ಹಿಡಿಯುವಂತೆ ಮಾಡುತ್ತದೆ.ಇದೇ ರೀತಿಯಾಗಿ 'ಹಂದಿ ಲಕ್ಕವ್ವ' ಕಥೆಯಲ್ಲಿ ಬರುವ ಲಕ್ಕವ್ವನು ಸಹ ಕಾಡಣ್ಣನ ಮನೆ ಸೇರುವುದು ಬಡತನದಿಂದಲೇ. ಸಮಾಜವನ್ನು ಬಿಟ್ಟು ಬದುಕಲು ಸಾಧ್ಯವಿಲ್ಲ ಒಂದಲ್ಲ ಒಂದು ರೀತಿಯಲ್ಲಿ ಸಮಾಜಕ್ಕೆ ಹೊಂದಿಕೊಂಡೇ ಬಾಳಬೇಕು. ಸಮಾಜ ನಮ್ಮನ್ನು ಸರಿದಾರಿಯತ್ತ ಕೊಂಡೊಯುವ ಕೆಲಸ ಮಾಡುತ್ತದೆ. ಅದಕ್ಕೆ ಬಡತನ ನಿವಾರಣೆಯಾಗಿ ಶಿಕ್ಷಣ ಪಡೆಯಬೇಕು. ಶಿಕ್ಷಣದಿಂದ ಬುದ್ಧಿವಂತರಾಗಿ ಬದುಕುವ ಮಾರ್ಗ ಕಂಡುಕೊಳ್ಳಬೇಕು.

**೩.೬.೪. ಬದಲಾವಣೆಯತ್ತ ಗ್ರಾಮ ಸಮಾಜ:**

ಗ್ರಾಮ ಸಮಾಜ ನಿರಂತರವಾಗಿ ಬದಲಾವಣೆಗೆ ಒಳಪಡುತ್ತಿದೆ. ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ಹಾಗೂ ಇಂದಿನ ಜಾಗತೀಕರಣದ ಹೊತ್ತಿನಲ್ಲಿ ಇದನ್ನು ಗುರುತಿಸಬಹುದಾಗಿದೆ. ಈ ಬದಲಾವಣೆಗೆ ಮೂಲ ಕಾರಣ ಸಾಮ್ರಾಜ್ಯಶಾಹಿ. ದೇಶಗಳ ಆರ್ಥಿಕ ಆಕ್ರಮಣ ಎನ್ನುವುದು ಮುಚ್ಚಿಟ್ಟ ಸತ್ಯವಾಗಿದೆ. ಇವು ತೃತೀಯ ಜಗತ್ತಿನ ರಾಷ್ಟ್ರಗಳನ್ನು ತಮ್ಮ ಮಾರುಕಟ್ಟೆಗಳಾಗಿ ಮಾಡಿಕೊಂಡು ಆರ್ಥಿಕ ಅಧಿಕಾರ ಕೇಂದ್ರೀಕರಣ ಮಾಡಿಕೊಂಡು, ಬಡ ಅಭಿವೃದ್ಧಿಶೀಲ ರಾಷ್ಟ್ರಗಳ ಸಮಾಜವನ್ನು ತಲ್ಲಣಗೊಳಿಸಿವೆ. ಬದಲಾಗುತ್ತಿರುವ ಗ್ರಾಮ ಸಮಾಜದ ಪ್ರವೃತ್ತಿಗಳನ್ನು ಹಲವು ಅಂಶಗಳ ಆಧಾರದ ಮೇಲೆ ಗುರುತಿಸಬಹುದಾಗಿದೆ. ನಗರ ಸಂಪರ್ಕದಿಂದ ಉಂಟಾಗುವ ಸೌಲಭ್ಯಗಳು, ಬದಲಾದ ಕುಟುಂಬ ವ್ಯವಸ್ಥೆ, ಮನುಷ್ಯ ಸಂಬಂಧಗಳಲ್ಲಿ, ಉದ್ಯೋಗದಲ್ಲಿ ಹೀಗೆ ಹಲವಾರು ಹಿನ್ನೆಲೆಗಳಲ್ಲಿ ಗಮನಿಸಿದಾಗ ಬದಲಾವಣೆಯ ಸ್ವರೂಪ ವಿಸ್ತರಿಸುತ್ತ ಹೋಗುತ್ತದೆ.

ಕೆಲವು ಬದಲಾವಣೆಗಳು ವ್ಯಕ್ತಿ, ಕುಟುಂಬ ಹಾಗೂ ಮಾನವ ಸಂಬಂಧಗಳ ಮೇಲೂ ಪರಿಣಾಮ ಬೀರಿದೆ. ಸಂಬಂಧಗಳು ಕೇವಲ ತಾತ್ವಿಕ ಅಥವಾ ವ್ಯವಹಾರಿಕ ಸ್ವರೂಪಕ್ಕೆ ಮಾತ್ರ ಸೀಮಿತವಾಗಿದ್ದು, ಆಳ ನಲೆಯನ್ನು ಕಳೆದುಕೊಂಡಿವೆ. ಅಣ್ಣ–ತಮ್ಮ, ತಂದೆ–ಮಗ, ಅತ್ತೆ–ಸೊಸೆ ಸಂಬಂಧಗಳು ಸಿನಿಕಗೊಂಡು ಎಲ್ಲವೂ ವ್ಯವಹಾರ, ಆರ್ಥಿಕ ಸಂಬಂಧದ ರೂಪ ಪಡೆದಿವೆ. 'ಅವಮಾನ' ಕಥೆಯಲ್ಲಿ ಬರುವ ಎಲ್ಲಾ ಪಾತ್ರಗಳು ವ್ಯವಹಾರಿಕ, ಆರ್ಥಿಕ ಸಂಬಂಧವನ್ನು ಪಡೆದುಕೊಂಡಿವೆ. 'ಕೋಳಿಪಾಲು', 'ಹಂದಿ ಲಕ್ಕವ್ವ', 'ಗೌರಿ', 'ಕಲ್ಯಾಣಿ'

ಮುಂತಾದ ಇಂಥ ಕತೆಗಳಲ್ಲಿ, ಹಳ್ಳಿ ಬದುಕಿನ ಒಳಗೆ ಮನುಷ್ಯ ಸಂಬಂಧಗಳು ಅವರ ಬದಲಾವಣೆಗಳು ಪ್ರೀತಿ, ದ್ವೇಷ ಒಂದರೊಳಗೊಂದು ಹಾಸುಹೊಕ್ಕಾಗಿರುವ ನೈಜ ಸ್ಥಿತಿಯು ಕಥೆಗಳಲ್ಲಿ ನಿರೂಪಿತವಾಗಿದೆ.

ಪರಸ್ಪರ ಅಪನಂಬಿಕೆ ಬೇಜವಾಬ್ದಾರಿತನ ಹೆಚ್ಚಾಗಿ ಸಂಬಂಧಗಳಲ್ಲಿ ಬಿರುಕು ಕಣಿಸಿಕೊಳ್ಳುತ್ತವೆ 'ಹಂದಿ ಲಕ್ಕವ್ವ' ಕಥೆಯಲ್ಲಿ 'ಗಂಗವ್ವ', 'ಗೌರಮ್ಮ'ರ ನಡುವಿನ ಸಂಬಂಧದ ಬಿರುಕು ನಂತರ 'ಕಾಡಣ್ಣ' ಗಂಗಮ್ಮ , ಗೌರಮ್ಮರ ನಡುವಿನ ಸಂಬಂಧದ ಬಿರುಕು ಹೆಚ್ಚಾಗಿ ಕಂಡು ಬರುತ್ತದೆ. ನಗರಗಳಲ್ಲಿ ಓದಿ ವೃತ್ತಿಗಳಿಸಿದ ಯುವ ಜನಾಂಗ ಹಳ್ಳಿಗೆ ಬಂದು, ಅವಿಭಕ್ತ ಕುಟುಂಬದ ಜವಾಬ್ದಾರಿ ವಹಿಸಿಕೊಳ್ಳಲು ನಿರಾಕರಿಸುತ್ತಿದ್ದಾರೆ. ಹಿಂದೆ ಮೂರು-ನಾಲ್ಕು ದಿನಗಳು ಜರುಗುತ್ತಿದ್ದ ಹಬ್ಬ-ಹರಿದಿನ, ಜಾತ್ರೆ, ಮದುವೆಗಳು ಕೂಡ ಇಂದು ಹಲವು ಗಂಟೆಗಳ ಆಚರಣೆಗೆ ಸೀಮಿತವಾಗಿವೆ. ಗ್ರಾಮೀಣ ಪ್ರದೇಶದಲ್ಲಿ ಪಶುಪಾಲನೆ ಆರಂಭವಾದಾಗಿನಿಂದ ಹೆಚ್ಚು ಕಡಿಮೆ ಮಹಿಳೆಯೇ ಪ್ರಮುಖ ಒಡೆತನವನ್ನು ಹೊಂದಿದ್ದಳು. ಆದರೆ ಇಂದು ತಾಂತ್ರಿಕತೆ, ಆಧುನಿಕತೆ ಹಳ್ಳಿಗೆ ಪ್ರವೇಶ ಪಡೆದಿರುವುದರಿಂದ ಪುರುಷನೇ ಅದರ ಎಲ್ಲಾ ಒಡೆತನ ಹೊಂದುತ್ತಿದ್ದಾನೆ.

# ಅಡಿ ಟಿಪ್ಪಣಿಗಳು

## ಬೀಚನಹಳ್ಳಿ ಅವರ ಎಲ್ಲ ಕಥೆಗಳು

೧. ಗುಬ್ಬಚ್ಚಿಗಳು–ಪು.ಸಂ–೩೩೨

ಗುಬ್ಬಚ್ಚಿಗಳು–ಪು.ಸಂ–೩೩೪–೩೩೫

ಗುಬ್ಬಚ್ಚಿಗಳು–ಪು.ಸಂ–೩೩೫

ಗುಬ್ಬಚ್ಚಿಗಳು–ಪು.ಸಂ–೩೩೫

೨. ಕರಿಮಣ್ಣಿನ ಗೊಂಬೆಗಳು–ಪು.ಸಂ–೭೮

ಕರಿಮಣ್ಣಿನ ಗೊಂಬೆಗಳು–ಪು.ಸಂ–೮೩

೩. ಕೋಳಿಪಾಲು–ಪು.ಸಂ–೨೦೦

ಕೋಳಿಪಾಲು–ಪು.ಸಂ–೨೦೮

ಕೋಳಿಪಾಲು–ಪು.ಸಂ–೨೦೦೮

# ಅಧ್ಯಾಯ ನಾಲ್ಕು
## ಕಥೆಗಳ ತಾತ್ವಿಕ ವಿನ್ಯಾಸಗಳು

ಸಾಹಿತ್ಯ ಪ್ರಕಾರಗಳೆಲ್ಲಾ ಸಣ್ಣಕತೆ ಅತ್ಯಂತ ಪ್ರಾಚೀನವಾದದ್ದು. ಬಹುಶಃ ಕಾವ್ಯದ ಜೊತೆಗೆ, ಅದೂ ಹುಟ್ಟಿರಬೇಕು. ಅಕ್ಷರ ವಿದ್ಯೆ ಇಲ್ಲದ ಜನಾಂಗಗಳಲ್ಲೂ ಕೂಡ ಜಾನಪದ ಸಾಹಿತ್ಯದ ಒಂದು ಪ್ರಕಾರವಾಗಿ ಅದು ಅಸ್ತಿತ್ವದಲ್ಲಿದೆ. ಶಿಷ್ಟ ಅದರ ರೂಪಗಳು ಅರೇಬಿಯನ್ ನೈಟ್ಸ್ ಕತೆಗಳಂತೆ, ಪಂಚತಂತ್ರ, ಕಥಾಸರಿತ್ಸಾಗರಗಳ ಕತೆಗಳಂತೆ ಸಾಕಷ್ಟು ಜನಪ್ರಿಯವಾಗಿದೆ. ಆದರೆ ಇಂದಿನ ಆಧುನಿಕ ಸಣ್ಣಕತೆ ಅವುಗಳಿಂದ ತೀರಾ ಭಿನ್ನವಾದದ್ದು. ಇಂದಿನ ಆಧುನಿಕ ರೂಪದಲ್ಲಿ ಅದು ಸಾಹಿತ್ಯ ಪ್ರಕಾರಗಳಲೆಲ್ಲ ಅತ್ಯಂತ ಅರ್ವಾಚೀನವಾದದ್ದು. ಕಾದಂಬರಿ ಇಂಗ್ಲೀಷಿನಲ್ಲಿ ಹದಿನೇಳನೆ ಶತಮಾನದ ಕೊನೆಗೆ ಆರಂಭವಾಗಿ, ಹದಿನೆಂಟನೆ ಶತಮಾನದಲ್ಲಿ ಬೆಳೆದು, ಹತ್ತೊಂಬತ್ತನೆ ಶತಮಾನದಲ್ಲಿ ಪ್ರಬುದ್ಧವಾದ ಒಂದು ಹೊಸ ಸಾಹಿತ್ಯ ಪ್ರಕಾರವಾದರೇ ಸಣ್ಣಕತೆ ಹತ್ತೊಂಬತ್ತನೆ ಶತಮಾನದ ತೀರ ಹೊಸ ಬೆಳವಣಿಗೆ. ನಮ್ಮ ಕಾಲಕ್ಕೆ ಅತ್ಯಂತ ಜನಪ್ರಿಯ ಸಾಹಿತ್ಯ ಪ್ರಕಾರವಾಗಿ ಸಣ್ಣಕತೆ ರೂಪಗೊಂಡಿದೆ. ಹಾಗಾದರೆ ಸಣ್ಣಕಥೆ ಎಂದರೇನು? ಎಂಬುದು ಪ್ರಶ್ನೆಯಾಗಿದೆ.

ಸಣ್ಣಕಥೆ 'ಕಥನ'ದ ಒಂದು ಪ್ರಕಾರವಾದುದರಿಂದ ಹಾಗೂ 'ಕಥನ'ದ ಚರ್ಚೆಯ ನೆಲೆಯಿಂದಲೇ 'ಸಣ್ಣಕತೆ'ಯ ಸ್ವರೂಪವು ಬೆಳೆದುಕೊಂಡು ಬಂದಿದೆ. ಸಣ್ಣಕಥೆ ಎಂಬ ಪದಪ್ರಯೋಗ ಇಂಗ್ಲೀಷಿನ ಭಾಷಾಂತರವಾಗಿಯೇ ಕನ್ನಡದಲ್ಲಿ ಪ್ರಚಲಿತವಾಗಿದೆ. ಮರಾಠಿಯಲ್ಲಿ ಸಣ್ಣಕತೆಯನ್ನು 'ಕಥಾ' ಎಂದೇ ಗುರುತಿಸಲಾಗುತ್ತದೆ. ಶಬ್ದದ ಅರ್ಥವ್ಯಾಪ್ತಿಗೂ 'ಸಣ್ಣ' ಪದದ ಅರ್ಥವ್ಯಾಪ್ತಿಗೂ ಅಂತರಗಳಿವೆ, ಇದನ್ನು ಆಕ್ಸಫರ್ಡ್‌ಡಿಕ್ಸನರಿ ಹಾಗೂ ಕಿಟಲ್ ಡಿಕ್ಸನರಿಯ ಮೂಲಕ ಇವುಗಳ ಅರ್ಥವ್ಯಾಪ್ತಿಯನ್ನು ಗುರುತಿಸಬಹುದು. ಎನ್ನುವುದನ್ನು

೧. ಸಣ್ಣಕತೆ ಸ್ಥಲ, ಕಾಲಗಳನ್ನು ತೀರ ಚಿಕ್ಕ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳುತ್ತದೆ

೨. ಅಪೇಕ್ಷಿತ ಅಥವಾ ನಿರೀಕ್ಷಿತ ಮಿತಿಗಳನ್ನು ತಲುಪುವುದಿಲ್ಲ ಹಾಗೂ

೩. ಅದು ಹೇಳುವುದು ಬಹಳ ಕಡಿಮೆ ಅಥವಾ ಸ್ವಲ್ಪದರಲ್ಲಿಯೇ ಅದು ಬಹಳಷ್ಟನ್ನು ಹೇಳುತ್ತದೇ ಎಂಬ ಅರ್ಥಗಳನ್ನು ನೀಡುತ್ತದೆ.

ಕನ್ನಡದ 'ಸಣ್ಣ' ಪದಕ್ಕೆ ಕಿಟ್ಟಲ್ ಡಿಕ್ಸನರಿಯಲ್ಲಿ ಕೊಟ್ಟಿರುವಂತಹ ಹತ್ತು ಅರ್ಥಗಳಲ್ಲಿ

ಎಂಬುದೊಂದು ಮಾತ್ರ ಸಣ್ಣಕಥೆಗೆ ಹೊಂದಿಕೆಯಾಗುತ್ತದೆ. ಉಳಿದವುಗಳು ಹೊಂದಿಕೆಯಾಗುವುದಿಲ್ಲ. ಒಟ್ಟಿನಲ್ಲಿ 'Short story' ಎನ್ನುವುದು 'ಸಣ್ಣಕಥೆ' ಎಂಬ ಅರ್ಥವನ್ನು ನೀಡುತ್ತದೇ. ಫ್ರಿಡ್‌ಮನ್‌ನ ಅಭಿಪ್ರಾಯದಲ್ಲಿ ಪ್ರಸಂಗ ಸಣ್ಣಕತೆಯ ಪ್ರತಿನಿಧಿಕ ಕ್ರಿಯೆ. ಆದರೆ ಪ್ರಸಂಗವೆಂದಾಗ ಕೇವಲ ಒಂದು ಘಟನೆ ಮಾತ್ರ ಸೂಚಿತವಾಗುವುದಿಲ್ಲ. "ಸಣ್ಣಕಥೆ ಒಂದು ಚಿತ್ರವಾಗುತ್ತದೆ. ಅದರ ಹಿಂದೆ ಒಂದು ವಿಚಾರವಿರುತ್ತದೆ. ಅದು ತನ್ನ ವಿಷಯದ ಸತ್ವವನ್ನು ನಿರ್ದೇಶಿಸುತ್ತದೆ" ಎಂದು ಹೇನ್ರಿ ಜೇಮ್ಸ್ ಅಭಿಪ್ರಾಯ ಪಟ್ಟಿದ್ದಾರೆ. "ಸಣ್ಣಕತೆ" ತನ್ನ ಸ್ವರೂಪದಲ್ಲೇ ಜನಾಂಗದಿಂದ, ಜನಸಮೂಹದಿಂದ ದೂರವಾದದ್ದು, ಮತ್ತು ಅದರ ಪರಾಮರ್ಶೆಯ ಚೌಕಟ್ಟು ಸಮಗ್ರ ಮಾನವ ಜೀವನವಾಗಲಾರದು ಎಂದು 'ಓ ಕಾನರ್' ಹೇಳಿದ್ದಾನೆ. ಇವನ ಪ್ರಕಾರ ಸಣ್ಣಕತೆಗೆ ನಿಜವಾದ ಅರ್ಥದಲ್ಲಿ ನಾಯಕನಿಲ್ಲ ಅವನು ಧೀರೋದಾತ್ತನೂ ಅಲ್ಲ, ಧೀರಲಲಿತನು ಅಲ್ಲ, ಸಣ್ಣಕತೆಯಲ್ಲಿ ಕಾಣಿಸಿಕೊಳ್ಳುವ ಮುಖ್ಯ ಪಾತ್ರಗಳು ಮುಳುಗಿ ಹೋದ ಜನರ ಗುಂಪಿಗೆ ಸೇರಿದವರು. ಲೇಖಕನಿಂದ–ಲೇಖಕನಿಗೆ ಪೀಳಿಗೆಯಿಂದ–ಪೀಳಿಗೆಗೆ ಅವರ ಸ್ವಭಾವ ಬದಲಾಗುತ್ತ ಹೋದರೂ ಅವರು ಮೂಲತಃ ಮುಳುಗಿ ಹೋದವರೂ ಇರುತ್ತಾರೆ. ಇವರು ಸಮಾಜದಿಂದ ಬಹಿಷ್ಕೃತರಾದವರು. ಹಾಗಾಗಿ ಸಮಾಜದ ಹೊರ ಅಂಚಿನಲ್ಲಿಯೇ ಸುಳಿದಾಡುವವರು, ಎಂದು ಕಥೆಯಲ್ಲಿ ಬರುವ ಪಾತ್ರಗಳನ್ನು ಕುರಿತು ಅಭಿಪ್ರಾಯ ಪಟ್ಟಿದ್ದಾರೆ.

ಸಣ್ಣಕತೆಯ ರಚನೆಯಲ್ಲಿ ವಿವರಗಳ ನಿರ್ದಿಷ್ಟತೆ, ಸಾಧನೆಗಳ ಮಿತವ್ಯಯ ಪರಿಣಾಮದ ಏಕಾಗ್ರತೆಗಳ ಮಹತ್ವವನ್ನು ಬಹಳಷ್ಟು ಜನ ಎತ್ತಿ ಹೇಳಿದ್ದಾರೆ. ಸಣ್ಣಕತೆಯ ಅವಕಾಶ ಸೀಮಿತವಾಗಿರುವುದರಿಂದ ಅದರಲ್ಲಿ ಶಬ್ದಗಳನ್ನು ದುಂದು ಮಾಡಿವಂತಿಲ್ಲ. ವಿವರಗಳೆಲ್ಲ ಕೇಂದ್ರ ಉದ್ದೇಶವನ್ನೆ ಪೋಷಿಸಬೇಕು. ಇದರಿಂದ ಸಣ್ಣಕತೆಗೆ ಉಳಿದ ಯಾವದೇ ಸಾಹಿತ್ಯ ಪ್ರಕಾರಕ್ಕೂ ಇಲ್ಲದಷ್ಟು, ಕರ್ಷಣ ಬಿಗಿ ಬರುತ್ತದೆ. ಕಲಾತ್ಮಕತೆಯ ಪ್ರದರ್ಶನಕ್ಕೆ ಇದು ಹೇಳಿಮಾಡಿಸಿದ ಸಾಹಿತ್ಯ ಪ್ರಕಾರವೆನಿಸಿದೆ. ಕಾದಂಬರಿಕಾರ ತನ್ನ ವಸ್ತುವನ್ನು ಸಡಿಲಗೊಳಿಸಿ ನಿಧಾನವಾಗಿ ಬೆಳೆಸಬಹುದು. ಅಲ್ಲಲ್ಲಿ ಆರಾಮಾಗಿ ನಿಂತು ಹರಟೆ ಹೊಡೆಯಬಹುದು. ನಾಟಕಕಾರ ತನ್ನ ದುರಂತಕಥೆಗೆ ಸಮಾಂತರವಾಗಿ ಇನ್ನೊಂದು ಉಪಕಥೆಯನ್ನು ಸೇರಿಸಿ ವೈನೋದಿಕ ಪರಿಹಾರವನ್ನು ಒದಗಿಸಬಹುದು. ಇಬ್ಬರೂ ಆಗಾಗ ಸ್ವಲ್ಪ ಉಸಿರೆಳೆದುಕೊಂಡು ಸಿಳ್ಳು ಹೊಡೆಯಬಹುದು ಆದರೆ ಸಣ್ಣಕತೆಯಲ್ಲಿ ಹಾಗೆ ಮಾಡಲು ಬರುವುದಿಲ್ಲ. ಆದರಿಂದಾಗಿ ಸಣ್ಣಕತೆಯಲ್ಲಿ ಉದ್ದಕ್ಕೂ ಒಂದು ಬಗೆಯ ತೀವ್ರತೆ, ಕರ್ಷಣ ತುಂಬಿಕೊಂಡಿರುತ್ತದೆ. ಅದು ಸಣ್ಣಕತೆಯಲ್ಲಿ ಜೀವನ ದರ್ಶನ, ವಿಷಣ್ಣತೆಗಳನ್ನು ಇನ್ನಷ್ಟು ಕಟುವಾಗಿರುತ್ತದೆ. ಸಣ್ಣಕತೆಯ ಮೂಲ ವಿನ್ಯಾಸ ಸಾಕಷ್ಟು ಪರಿಚಿತವಾದದ್ದು. ಮನುಷ್ಯಲೋಕದ ಮಾದರಿಗಳಾಗಿ, ಎರಡು ಮೂರು ಪಾತ್ರಗಳ ಆಯ್ಕೆ ಆ ಪಾತ್ರಗಳು ತೀರಾ ಉದುಕ್ತವೂ ಅಲ್ಲ. ತೀರಾ ಅಸಹ್ಯವೆನಿಸುವಷ್ಟು ಹೀನವು ಅಲ್ಲ. ಅವುಗಳನ್ನು ಆಯ್ದು ಕೆಲವೇ ವಿವರಗಳಲ್ಲಿ ವಿಶಿಷ್ಟಕರಿಸುವುದು. ಅವುಗಳ ಬಲ ಮತ್ತು ಮುಖ್ಯವಾಗಿ ದೌರ್ಬಲ್ಯಗಳನ್ನು ಸಹಾನುಭೂತಿಪರ ತಿಳಿವಳಿಕೆ ಮತ್ತು ನಿರ್ಲಿಪ್ತತೆಗಳ ಯುಕ್ತ ಸಮನ್ವಯದಿಂದ ಓದುಗರ ಗಮನಕ್ಕೆ ತರುವುದು.

ಸಣ್ಣಕತೆಗಳನ್ನು ಭಾಷೆ, ಶೈಲಿ, ವಸ್ತುವಿನ ದೃಷ್ಟಿಯಿಂದ ನೋಡುವುದಾದರೆ ಪ್ರಾರಂಭದ ಕಥೆಗಾರರಾದ ಮಾಸ್ತಿಯವರ ಕಥೆಗಳಲ್ಲಿ ಆಳವಾದ ಧಾರ್ಮಿಕ ಶ್ರದ್ಧೆಯಿಂದ ಜೀವನದ ಸಂಗತಿಗಳನ್ನೆಲ್ಲಾ ಪರಿಭಾವಿಸಿ ಬೆಲೆಕಟ್ಟುವ ಮನಸ್ಸು ಅವರದು. ಪರಂಪರಾಗತ ಶ್ರದ್ಧೆ ನಂಬಿಕೆಗಳನ್ನು ಪ್ರಶ್ನಿಸುವಂತಹ ಸಮಸ್ಯೆಗಳು ಎದುರಾದರೂ ಆ ಸಾಂಪ್ರದಾಯಕ ಮೌಲ್ಯಗಳ ಚೌಕಟ್ಟಿನಲ್ಲಿಯೇ ನಿಶ್ಚಿತವಾದ ಪರಿಹಾರವನ್ನು ಹುಡುಕುವ ಧೋರಣೆ ಅವರ ಕಥಾ ಸಾಹಿತ್ಯದಲ್ಲಿ ಪ್ರಧಾನವಾಗಿ ಎದ್ದುಕಾಣುವ ಗುಣವಾಗಿದೆ. ಇವರಂತೆ ಮುಂದೆ ಹುಟ್ಟಿಕೊಂಡ ಕಥೆಗಾರರು ಸಹ ಸಮಯ ಅನುಗುಣವಾದಂತಹ ಕಥಾ ವಸ್ತುವನ್ನು ಆಯ್ಕೆ ಮಾಡಿಕೊಂಡು ರಚನೆಯಲ್ಲಿ ತೊಡಗಿದರು. ಪ್ರಗತಿಶೀಲ ಕಥೆಗಾರರು ಸಾಮಾಜಿಕ ವಿಕ್ಷಮತೆ ಶೋಷಣೆಗಳ ವಿರುದ್ಧ ಕುರಿತು, ಸಮಾಜದ ಪರಂಪರಾಗತ ಮೌಲ್ಯಗಳನ್ನು ತೀವ್ರವಾಗಿ ಪ್ರಶ್ನಿಸಬೇಕೆಂಬುದು ಪ್ರಗತಿಶೀಲ ಲೇಖಕರ ವಾದವಾಗಿತ್ತು. ೧೯೫೦ರ ನಂತರ ನವ್ಯಕಾವ್ಯದ ಜೊತೆಯಲ್ಲಿಯೇ ಕನ್ನಡ ಸಣ್ಣ ಕಥೆಗೆ ಹೊಸ ಸಂವೇದನೆಯೊಂದು ಬೆಳೆದು ಬಂದಿತು. ಬದಲಾದ ಈ ಪರಿಸರದ ಮೌಲ್ಯಗಳು ಬೇರೆ ರೀತಿಯಲ್ಲಿ ಬರೆಯುವಂತೆ ಕಥೆಗಾರರಿಗೆ ಪ್ರೇರಣೆ ನೀಡಿದವು. ನವ್ಯಕಥೆಗಾರರ ದೃಷ್ಟಿಯಲ್ಲಿ ಅಂದಿನ ಸಮಾಜದ ನೈತಿಕ, ಧಾರ್ಮಿಕ, ಆದ್ಯಾತ್ಮಿಕ ನಂಬಿಕೆ ಹಾಗೂ ಮೌಲ್ಯಗಳು ಶೋಧನೆಗೆ ಗುರಿಯಾದವು. ಮುಂದೆಬಂದಂತಹ ದಲಿತ-ಬಂಡಾಯದ ಕವಿಗಳು ಜನರ ನೋವುಗಳನ್ನು, ಕಷ್ಟನಷ್ಟಗಳನ್ನು, ಸಂಕಟಗಳನ್ನು ರೈತರ ಸ್ಥಿತಿಗತಿ, ದೀನ ದಲಿತರ ಜೀವನ ಕ್ರಮಗಳನ್ನು ವಸ್ತುವನ್ನಾಗಿಟ್ಟುಕೊಂಡು ಕಥೆ ರಚಿಸಿದರು.

ಮುಖ್ಯವಾಗಿ ಕಥೆಯ ಪದ್ಯ ಮತ್ತು ಗದ್ಯಗಳೆರೆಡರ ಸ್ವರೂಪದಲ್ಲಿಯೂ ಇರುತ್ತಿತ್ತು. ಬರವಣಗೆಯೇ ಇಲ್ಲದಿದ್ದ ಕಾಲದಲ್ಲಿ ಕಥೆಗಳನ್ನು ಕೇಳಿ ನೆನಪಿನಲ್ಲಿ ಇಟ್ಟುಕೊಳ್ಳುತ್ತಿದ್ದದ್ದು ಒಂದು ಪರಿಪಾಠವಾಗಿತ್ತು. ತೊಂಡಿ ಅಥವಾ ಮೌಖಿಕ ಸಂಪ್ರದಾಯದಲ್ಲಿ ಒಬ್ಬರಿಂದ ಇನ್ನೊಬ್ಬರಿಗೆ ಸಾಗುತ್ತಿದ್ದ ಕಥೆಯು ಕಾಲ, ದೇಶ, ಪರಿಸರ ಹಾಗೂ ಅವರವರ ಕಲ್ಪನೆಗನುಸಾರವಾಗಿ ಬದಲಾಗುತ್ತಾ ಸಾಗುತ್ತಿತ್ತು. ಗದ್ಯವನ್ನು ನೆನಪಿನಲ್ಲಿಟ್ಟುಕೊಳ್ಳುವುದಕ್ಕಿಂತ ಪದ್ಯವನ್ನು ನೆನಪಿನಲ್ಲಿಟ್ಟುಕೊಳ್ಳುವುದು ಬಹಳ ಸುಲಭದ ಸಂಗತಿ ಎನಿಸಿತ್ತು. ವಿಶೇಷವಾಗಿ ಗದ್ಯ ಮತ್ತು ಪದ್ಯರೂಪದಲ್ಲಿ ಕತೆಗಳು ಜನಸಾಮಾನ್ಯರ ಜೀವನ, ಆಸೆ ನಿರಾಶೇ ನೋವು, ನಲಿವು. ಧೈರ್ಯ, ಸಾಹಸ ಮುಂತಾದವುಗಳನ್ನು ವಸ್ತುವಾಗಿಟ್ಟುಕೊಂಡು ರಚಿತವಾಗಿರುತ್ತಿದ್ದವು.

ಸಾಹಿತ್ಯದಲ್ಲಿ ಈ ವಸ್ತು ಮತ್ತು ಸಾಮೂಹಿಕ ಚಟುವಟಿಕೆಯ ಅಭಿವ್ಯಕ್ತಿಗಳಲ್ಲಿ ಒಂದಾದ ಭಾಷೆ ಈ ಎರಡಕ್ಕೂ ಸಮಾನವಾದ ಸ್ಥಾನವನ್ನು ನೀಡಲಾಯಿತು. ಭಾಷೆಗೂ ಶೈಲಿಗೂ ಸಂಬಂಧವಿದೆ. ಭಾಷೆಯಲ್ಲಿ ಮೃದುಳುವ ಒಂದು ಕ್ರಿಯೆ ಶೈಲಿ. ಪಾಶ್ಚಾತ್ಯರಲ್ಲಿ ಬಳಕೆಯಲ್ಲಿರುವ 'ಸ್ಟೈಲ್' ಎಂಬ ಪರಿಕಲ್ಪನೆಗೆ ಇದು ಸಂವಾದಿಯಾದುದು. ನಮ್ಮಲ್ಲಿಯ 'ರೀತಿ' ಪಾಶ್ಚಾತ್ಯರ 'ಫಾರಂ' 'ವಸ್ತು' ಅಥವಾ ಆಶಯ ಎಂಬುದು ಪಾಶ್ಚಾತ್ಯರ 'ಕಂಟೆಂಟ್' ಅಥವಾ 'ಥೀಮ್' ಎಂಬ ಪರಿಕಲ್ಪನೆಗೂ ಸಮಾನವಾದುದು. ಆದರೆ ಕನ್ನಡ ಭಾಷೆಯ ಅಭ್ಯಾಸ ಕುರಿತಂತೆ ಅದರ ಆಳ-ಅಗಲ-ವ್ಯಾಪ್ತಿ-ಮಿತಿಗಳನ್ನು ಗುರುತಿಸುವ ಕೆಲಸ ಕನ್ನಡದಲ್ಲಿ ಸಾಕಷ್ಟು ನಡೆದಿದೆ. ಹೀಗೆ ಸುಮಾರು ವರ್ಷಗಳಿಂದ ನಡೆದುಕೊಂಡು ಬಂದಿರುವ ಕಥೆಯ ತನ್ನದೇ ಆದ ವಸ್ತು, ಭಾಷೆ ಶೈಲಿಯನ್ನು ಅಳವಡಿಸಿಕೊಂಡು ಕಥಾ ಸಾಹಿತ್ಯ ರಚನೆಯಾಗಿವೆ.

ಇತ್ತೀಚೆಗೆ ಬರೆಯುತ್ತಿರುವಂತಹ ಕಥೆಗಾರರು ಸಹ ತಮ್ಮದೇ ಆದ ವಸ್ತು, ಭಾಷೆ, ಶೈಲಿಯನ್ನು ಅಳವಡಿಸಿಕೊಂಡಿದ್ದಾರೆ. ಬೋಳುವರ, ನಾಗವೇಣಿ, ಅಮರೇಶ ನುಗಡೋಣ, ಬೀಚನಹಳ್ಳಿ, ಕುಂ.ವಿ. ದೇವನೂರು, ಸಿದ್ದಲಿಂಗಯ್ಯ ಹೀಗೆ ಬರೆಯುವವರ ತಂತ್ರಗಾರಿಕೇ ವಸ್ತು ಭಾಷೆಗಳು ಸಹ ಬದಲಾವಣೆಯತ್ತ ಸಾಗಿವೆ. ಒಳ್ಳೆಕಥೆಗಾರನು ೧೦ ಕಥೆಗಳ ಒಂದು ಕಥಾಸಂಕಲನವನ್ನು ಹೊರತಂದರೆ ಅದರಲ್ಲಿರುವ ೧೦ ಕಥೆಗಳ ಭಾಷೆ, ವಸ್ತು ಕಥಾವಿನ್ಯಾಸ ಒಂದೇ ಆಗಿರುವುದಿಲ್ಲ. ಬೇರೆ-ಬೇರೆ ಆಗಿರುತ್ತದೆ. ಡಾ. ಕರಿಗೌಡ ಬೀಚನಹಳ್ಳಿ ಅವರ ೩೮ ಕಥೆಗಳು ಸಹ ಭಾಷೆ ತಂತ್ರ ವಸ್ತುವನ್ನು ಒಳಗೊಂಡು ರಚನೆಯಾಗಿದ್ದು ಕಥೆಯಿಂದ ಕಥೆಗೆ ಭಿನ್ನತೆಯನ್ನು ಹೊಂದಿದೆ. ಅವುಗಳ ಕಥೆಗಳ ತಾಂತ್ರಿಕ ವಿನ್ಯಾಸವನ್ನು ಒಂದೊಂದಾಗಿ ಈ ಮುಂದಿನಂತೆ ತಿಳಿಯಪಡಿಸಲಾಗಿದೆ.

**ಒಂದು ಅಪೂರ್ವ ಸಂಸಾರ:**

ಈ ಕಥೆ ಒಂದು ಕುಟುಂಬದ ನಿತ್ಯ ಬದುಕಿನ ಸ್ಥಿತಿಗತಿಯನ್ನು ಕಟ್ಟಿಕೊಡುತ್ತದೆ. ಸಾಬುಲಾಲ- ಬೂಬಮ್ಮ ದಂಪತಿಗಳಿಗೆ ಮೂವರು ಮಕ್ಕಳು. ದುಡಿದು ಜೀವನ ಸಾಗಿಸಬೇಕು. ಹೊರತು ಬೇರೆ ಆದಾಯವಿಲ್ಲದ ಕುಟುಂಬವಿದು. ಮಂಡ್ಯ ಜಿಲ್ಲೆಯ ಒಂದು ಪುಟ್ಟ ಹಳ್ಳಿಯಿಂದ ದುಡಿಯಲು ಬಂದು ಬೆಂಗಳೂರು ನಗರದ ಸಮೀಪದ ಹಳ್ಳಿಗೆ ಬಂದು ನೆಲೆಸಿ ನಿಂತದ್ದು. ಸಾಬುಲಾಲ್ ಏನೇನೋ ಕೆಲಸಗಳನ್ನು ಹೊಟ್ಟೆ ತುಂಬಿಸಿಕೊಳ್ಳಲು ಮಾಡುತ್ತಿದ್ದ. ಮೀನುಹಿಡಿದು ಮಾರುವುದನ್ನು ಮಾಡುತ್ತಿದ್ದ. ಹೆಂಡತಿ ಬೂಬಮ್ಮ 'ಪೊಲೀಸ್ ಪೇದೆಗಳ ತರಬೇತಿ ಕೇಂದ್ರ'ದಲ್ಲಿ ಅಡಿಗೆ ಕೆಲಸ ಮಾಡುತ್ತಿದ್ದಳು. ಮಕ್ಕಳಲ್ಲಿ ಇಬ್ಬರು ಹುಡುಗರು ಸೈಕಲ್ ಶಾಪ್‌ನಲ್ಲಿ ದುಡಿಯುತ್ತಿದ್ದರೆ ಮಗಳು ಬೇಗಂ ಚಿಕ್ಕವಳು ತಾಯಿಜತೆ ಇರುತ್ತಿದ್ದಳು. ಕಥೆ ಆರಂಭವಾಗುವುದು. ಸಾಬುಲಾಲ್ ಬಂದು ನೆಲಸಿ 'ಈ ಪಿತೃಪಕ್ಷಕ್ಕೆ' ಹನ್ನೆರಡು ವರ್ಷ. ಅದರ ನಿಮಿತ್ತ ಹೆಂಡತಿ, ಗಂಡ-ಸೇರಿ ಒಂದು ಊಟ ಮಾಡುವ ಹಬ್ಬ ಆಚರಣೆ ಮಾಡಲು ಹಂಬಲಿಸುತ್ತಾರೆ. ಆ ದಿನ ಗಂಡ ಮೀನು ಹಿಡಿದು ಮಾರಿ ದುಡ್ಡು ತರಲು ಹೋಗುತ್ತಾರೆ. ದುಡಿದ ಹಣವನ್ನು ಕೇಳಿ ತರಲು ಮಕ್ಕಳಿಗೆ ತಾಯಿ ಹೇಳುತ್ತಾಳೆ. ತಾನು ಏನಾದರೂ ಸಂಪಾದಿಸಲು ಪ್ರಯತ್ನಿಸುತ್ತಾಳೆ.

ಕಥೆಯಲ್ಲಿ ಸಾಬುಲಾಲು ಆ ದಿನ ಮೀನು ಹಿಡಿಯಲು ಪ್ರಯತ್ನಿಸುವ ಚಿತ್ರಣವಿದೆ. ತಾಯಿ ಬೂಬಮ್ಮ ನಿಂಗೇಗೌಡರ ಮನೆಯಿಂದ ಹಣ್ಣು ತಂದು ಅದನ್ನು ಮಗಳಿಗೆ ನೀಡಿ ಮಾರಿಕೊಂಡು ಬರಲು ಹೇಳುತ್ತಾಳೆ. ಮಕ್ಕಳಿಬ್ಬರು ಕೆಲಸಕ್ಕೆ ಹೋಗಿ ಬರುವಾಗ ತಾವು ದುಡಿದ ಹಣವನ್ನು ಕೇಳಿ ತರಲು ಹೋಗುತ್ತಾರೆ. ಹೀಗೆ ಆ ದಿನ ತಮ್ಮ ತಮ್ಮ ಸಂಪಾದನೆಯಿಂದ ಬಂದ ಹಣದಿಂದ ಪಿತೃಪಕ್ಷ ನಡೆಸುವ ನೆಪದಲ್ಲಿ ಒಳ್ಳೆಯ ಅಡಿಗೆ ಮಾಡಿ ಉಣ್ಣುವ ಹಂಬಲ ಅವರದು. ಆದರೆ ಸಾಬುಲಾಲು ಕಷ್ಟಪಟ್ಟು ಮೀನು ಹಿಡಿದು, ಸಂತೆಯಲ್ಲಿ ಮಾರಿ, ಸ್ವಲ್ಪ ದವಸ ತರುತ್ತಾನೆ. ಮಗಳು ಹಣ್ಣು ಮಾರಲು ಹೋಗಿ ಅವರಿವರಿಂದ ಫಜೀತಿಗೆ ಒಳಗಾಗಿ ಅಳುತ್ತ ಬರುತ್ತಾಳೆ. ಮಕ್ಕಳಿಬ್ಬರು ದುಡಿದ ಹಣವನ್ನು

ಮಾಲೀಕನಿಂದ ಕೇಳಿ ತರಲು ವಿಫಲವಾಗುತ್ತಾರೆ. ತಾಯಿಯಿಂದ ಬಯ್ಯಸಿಕೊಂಡು ಮಗಳು ಬೇಗಂ ನಿರಾಸೆಯಿಂದ ಹತಾಸೆಯಿಂದ ಮೂಲೆ ಸೇರುತ್ತಾಳೆ. ಸಂಜೆ ಹೊತ್ತಿಗೆ ಅವರ ಸಂಪಾದನೆ ಶೂನ್ಯ ಸ್ಥಿತಿಗೆ ಬಂದಿರುತ್ತದೆ. ಬೂಬಮ್ಮ ಅದರಿಂದಾಗಿ ಸಿಟ್ಟು, ಅಸಹಾಯಕತೆಯಲ್ಲಿ ಕುದಿಯುತ್ತಿರುತ್ತಾಳೆ. ಕಥೆಯ ಕೊನೆಯಲ್ಲಿ ಮಗಳು ಮನೆಯಲ್ಲಿ ಇರುವುದಿಲ್ಲ. ಎಲ್ಲರಿಗೂ ಆತಂಕವಾಗುತ್ತದೆ. ಸಾಬುಲಾಲು ತನ್ನ ದಿನದ ಮುಖ್ಯಕಾರ್ಯವಾದ ಪಿತೃಪಕ್ಷವನ್ನು ಮರೆತು ಮಗಳನ್ನು ಹುಡುಕಲು ಹೊರ ನಡೆಯುತ್ತಾನೆ. ಈ ಮೌನ ಕಥೆಗೆ ಜೀವಂತಿಕೆಯನ್ನು ತಂದಿದೆ. ಕಥೆಯಲ್ಲಿ ಎಲ್ಲರೂ ಒಂದು ಹಂಬಲಕ್ಕಾಗಿ ಆ ದಿನ ಕುದಿಯುತ್ತಾರೆ. ಆದರೆ ಮಗಳು ಕಾಣೆಯಾದಾಗ ಎಲ್ಲರೂ ಸ್ತಬ್ದವಾಗುತ್ತಾರೆ. ತಂದೆಯಂತೂ ಎಲ್ಲ ಮರೆತು ಮಗಳನ್ನು ಹುಡುಕುತ್ತ ಹೋಗುತ್ತಾನೆ, ಕಷ್ಟವನ್ನೆಲ್ಲಾ ಮರೆತು ಹೋಗುವುದು. ತಂದೆ–ಮಗಳ ಬಾಂದವ್ಯವನ್ನು ಗುರುತಿಸುತ್ತದೇ ಮೌನವು ಕತೆಗೆ ಶಕ್ತಿಯನ್ನು ತಂದು ಕೊಡುತ್ತದೆ.

**ಅರಣ್ಯ:**

ಈ ಕಥೆ ಒಂದು ಊರಿನಲ್ಲಿರುವ ಜನರ ನಡವಳಿಕೆಗಳು ಹಾಗೂ ಹೆಣ್ಣಿನ, ಸಾವಿನ ದಾರುಣ ಸ್ಥಿತಿಗತಿಯನ್ನು ಕಟ್ಟಿಕೊಡುತ್ತದೆ. ಕಥೆಯಲ್ಲಿ ಹೆಚ್ಚು ಸಂಭಾಷಣೆ ಕಂಡು ಬರುವುದಿಲ್ಲ. ಕಥೆಗಾರರು ಓದುಗರ ಜೋತೆಗೆ ಹೊಸೂರು ಮತ್ತು ಹಳೆವೂರಿನ ಜನರ ಮನಸ್ಸಿನ ಭಾವನೆಗಳು ಜೋತೆಗೆ ಹೊಸೂರು ಕೆರೆಲಿ ತೆಲುತ್ತಿದ್ದ ಚೆನ್ನಿಯ ಹೆಣವನ್ನು ಕುರಿತು ತನ್ನ ಕಥನವನ್ನು ಹಂಚಿಕೊಳ್ಳುತ್ತಾರೆ. ನಿಂಗೇಗೌಡ ಹೊಸೂರು ಮತ್ತು ಹಳೆವೂರಿನ ಗೌಡಿಕೆಯನ್ನು ನೋಡಿಕೊಳ್ಳುವುವನು. ರಾಜ–ನಿಂಗೇಗೌಡ ಮಗ ಇವನು ಹುಟ್ಟಿದು ಮಾತ್ರ ಪಾಟೀಲ್‌ಗೌಡರಿಗೆ ಅಂದರೆ ಪಾಟೀಲ್‌ಗೌಡರು ನಿಂಗೇಗೌಡನ ಹೆಂಡತಿಯನ್ನು ಇಟ್ಟುಕೊಂಡಿದ್ದ. ಪಾಟೀಲ್‌ಗೌಡ, ನಿಂಗೇಗೌಡ ಇಬ್ಬರು ಸಹೋದರರು. ಭೈರ ಪಾಟೀಲ್‌ಗೌಡರ ಮನೆಯಾಳು. ನಿಂಗಣ್ಣ–ನಿಂಗಕ್ಕ ಗಂಡ ಹೆಂಡತಿಯರು. ಒಬ್ಬಳೇ ಮಗಳು ಚೆನ್ನಿ. ಈಕೆಯು ಪಾಟೀಲ್‌ಗೌಡರ ಆಳು ಭೈರನ ಮಾಲು, ನಿಂಗಣ್ಣ–ನಿಂಗಕ್ಕ ಬಡತನದ ಬೇಗೆಯಿಂದ ಬೆಯುತ್ತಿರುವ ಸಂದರ್ಭದಲ್ಲಿ ವಯಸ್ಸಿಗೆ ಬಂದ ಚೆನ್ನಿಯು ಸಾವನ್ನಪ್ಪುತ್ತಾಳೆ.

ಈ ಕಥೆಯ ಪ್ರಾರಂಭವಾಗುವುದು. 'ಯಾವುದೋ ಹೆಣ ಹೊಸೂರು ಕೆರೆಲಿ' ಎಂಬ ವಾಕ್ಯದಿಂದ ಪ್ರಾರಂಭವಾಗುತ್ತದೆ. ಹಳೆವೂರು–ಹೊಸೂರು ಎಂಬ ಹಳ್ಳಿಯಲ್ಲಿ ಗೌಡ ಮನೆತನದವರು ದಬ್ಬಾಳಿಕೆಯಿಂದ ಜೀವನ ನಡೆಸುತ್ತಿದ್ದರು. ನಿಂಗೇಗೌಡ–ಪಾಟೀಲಗೌಡ ಸಹೋದರರು. ನಿಂಗೇಗೌಡನಿಗೆ ಒಬ್ಬ ಮಗ–ರಾಜ ಪಾಟೀಲಗೌಡನ ಮನೆಯ ಆಳು ಬೈರ ಈತನು ಕೆಳವರ್ಗದ ನಿಂಗಣ್ಣ–ನಿಂಗಕ್ಕನ ಮಗಳಾದ ಚೆನ್ನಿಯನ್ನು ಇಟ್ಟುಕೊಂಡು ಆಕೆಯನ್ನು ಬಳಸಿಕೊಂಡು ಆಕೆಯ ಗರ್ಭಾವಸ್ಥೆಗೆ ಕಾರಣನಾಗುತ್ತಾನೆ. ಆಕೆಯು ನಾನು ಮುಟ್ಟಾಗಲಿಲ್ಲ ಎಂದು ಚೆನ್ನಿಯು ಭೈರನಿಗೆ ಹೇಳಿದಾಗ ನಾನೇನು ಮಾಡಲಿ ಎಂದು ನುಸುಳಿಕೊಂಡಾಗ ಆಕೆಯು ಒಂದು ದಿನ ಕೆರೆಯಲ್ಲಿ ಬಿದ್ದು ಸಾವನ್ನಪ್ಪುತ್ತಾಳೆ. ನಂತರ ಅದರ ಹೆಣವನ್ನು ರಾಜ ನೋಡಿಕೊಂಡು ಊರಿನ ಜನರಿಗೆಲ್ಲ ಹೇಳುತ್ತಾನೆ. ಅದನ್ನು ಚೆನ್ನಣ್ಣ, ಭೈರ ಕೆರೆಯಿಂದ

ಹೆಣವನ್ನು ಹೊರತರುತ್ತಾರೆ. ಗೌಡ ಬರುತ್ತಾನೆ ಅದನ್ನು ತೆಗೆದುಕೊಂಡು ಹೋಗುವ ಮುನ್ನ ಚೆನ್ನಿಯ ತಂದೆಯನ್ನು ಕರೆಸುತ್ತಾರೆ. ಬಂದ ನಿಂಗಣ್ಣ ಮಗಳ ಮಮತೆಯಿಂದ ಗೋಳಾಡುತ್ತಾನೆ. ನಂತರ ಹೆಣಕ್ಕೆ ಕೈಹಾಕಿ ಊರ ಹೊರಗಿರುವ ಅರಣ್ಯವೊಂದರಲ್ಲಿ ನವುಲುಕಲ್ಲಿನ ಬುಡದಲ್ಲಿಟ್ಟು ಮೇಲೆ ಸೋಪ್ಪು ಮುಚ್ಚಿ ಬಂದರು. ಮಗಳನ್ನು ಹುಡುಕಲು ಹೋಗಿದ್ದ ನಿಂಗಕ್ಕ ಬಂದು ಗೋಳಾಡುತ್ತಾಳೆ. ೧೬ನೇ ದಿನಕ್ಕೆ ತೀತಿ ಮಾಡುತ್ತಾಳೆ. ಪೋಲಿಸರು ಬಂದು ವಿಚಾರಣೆ ನಡೆಸುತ್ತಾರೆ. ಎಂದಿನಂತೆ ಹನುಮರಾಯನ ಗುಡಿಯ ಹತ್ತಿರ ಚೌಕಾಬಾರ ಶುರುವಾಯಿತು.

ವಲ್ಲದ ಮನಸ್ಸಿನಿಂದ ಬಂದ ನಿಂಗಣ್ಣನ ಮನಸ್ಥಿತಿಯನ್ನು ಗಮನಿಸಿದರೆ 'ಹೆಣ್ಣು ಹುಟ್ಟಿದ ಮನೆ ಹೊರಗು' ಎಂಬ ಮಾತು ಸತ್ಯವಾಗಿದೆ ಎಂದೆನಿಸುತ್ತದೆ. ಬಡತನವು ಇದಕ್ಕೆ ಕಾರಣ ಒಂದು ಊರಿನ ಜನತೆಯ ಮನೋಭಾವಗಳು ಅಸಹ್ಯವನ್ನುಂಟು ಮಾಡುವಂತೆ ಗೋಚರಿಸುತ್ತವೆ. ಅಂತಃಕರಣಕ್ಕೆ ಮಿತಿಯಾದ ಹೃದಯಗಳಿವೆ ಎಂದೆನಿಸುತ್ತದೆ.

**ಒಡಲ ತವಕ:**

ಈ ಕಥೆ ಒಂದು ಸಂಸಾರದ ಸ್ಥಿತಿಗತಿಯನ್ನು ಕಟ್ಟಿಕೊಡುತ್ತದೆ. ಕುಟುಂಬದಲ್ಲಿ ಒದಗಿ ಬಂದಂತಹ ಕಷ್ಟಕಾರ್ಪಣ್ಯಗಳನ್ನು ಸಹಿಸಲಾಗದೆ ಎಲ್ಲವನ್ನು ಕಳೆದುಕೊಂಡು ನಿರ್ಗತಿಕರಾಗುವ ಸನ್ನಿವೇಶವನ್ನು ಕಟ್ಟಿಕೊಡುತ್ತದೆ. ಸಿದ್ದೇಗೌಡ ಈತನನ್ನು ಹೋರಿಸಿದ್ದೇಗೌಡ ಎಂದು ಕರೆಯುತ್ತಿದ್ದರು. ಸುತ್ತ-ಮುತ್ತಲಿನ ಹಸುಗಳು ಕರುಗಳನ್ನು ಹಾಕಲು ಸಿದ್ದೇಗೌಡನ ಹೋರಿಯೇ ಕಾರಣವಾಯಿತ್ತು. ಸಿದ್ದೇಗೌಡನಿಗೆ ಮೂವ್ವರು ಮಕ್ಕಳು. ತಿಮ್ಮೇಗೌಡ, ರಾಮೇಗೌಡ, ಭಾಗ್ಯ. ರಾಮೇಗೌಡ ಆರನೇ ತರಗತಿ ಓದಿ ಫೆಲಾಗಿ ಬಿಟ್ಟವನು ಶಾಲೆಯ ಕಡೆ ನೋಡಲಿಲ್ಲ. ಹೋರಿಯ ನಗಾ ಇಡುವುದರಲ್ಲಿ ತೋಡಗಿದನು. ತಿಮ್ಮೇಗೌಡ ಮತ್ತು ಭಾಗ್ಯ ಸಾಲಿ ಕಲಿಯುವವರು. ಭಾಗ್ಯ ಹಳ್ಳಿಯಲ್ಲಿಯೇ ಬಹಳ ಚೆನ್ನಾಗಿ ಓದುವ ಹುಡುಗಿಯಾಗಿದ್ದಳು. ತನ್ನವ್ವ ಕೆಮ್ಮುದಮ್ಮಿನಿಂದ ಕೊರಗುವ ಅನಾರೋಗ್ಯವಂತೆ. ದೊಡ್ಡಟ್ಟಿಗೌಡ ಈತ ಬೀಚನಳ್ಳಿಯ ದೊಡ್ಡಕುಳ. ಗೌಡಿಕೆ ಮಾಡುವುದು ಇವನ ದಗದ ಆಗಿತ್ತು. ಈತನ ಆಳು ಮುದ್ದ ದಲ್ಲಾಳಿ ಕರಿಯ ಈತನು ಅವರಿವರ ಮನೆಯ ಹೆಣ್ಣುಗಳನ್ನು ವಿವಾಹ ಮಾಡಿಸುವುದು ಈತನ ಕಾರ್ಯವಾಗಿತ್ತು. ರಾಜ-ನಿಂಗೇಗೌಡರ ಮಗ ಹಾಗೂ ರಾಜ ಭಾಗ್ಯಳನ್ನು ವಿವಾಹವಾಗುವವನು.

ಒಡಲ ತವಕ ಕಥೆಯ ಒಂದು ಕುಟುಂಬದ ಒಂದು ಹೋರಿಯಿಂದಲೇ ನಡೆದುಕೊಂಡು ಹೋಗುವ ವಿಚಿತ್ರ ಸಂಸಾರವೆಂದರೆ ತಪ್ಪಾಗಲಾರದು. ಹೋರಿ ಸಿದ್ದೇಗೌಡ ಮೂವ್ವರು ಮಕ್ಕಳು ಮತ್ತು ಅನಾರೋಗ್ಯದಿಂದ ಬಳಲುತ್ತಿದ್ದ ಹೆಂಡತಿಯನ್ನು ಹೋರಿಯಿಂದ ಬಂದ ಹಣದಿಂದಲೇ ಸಂಸಾರ ನಡೆಸುತ್ತಿದ್ದ ಮಕ್ಕಳನ್ನು ಶಾಲೆಗೆ ಕಳಿಸುವುದು ಅವರಿಗೆ ಪೆನ್ನು, ಪುಸ್ತಕ, ಬಟ್ಟೆ, ಫೀಜು ಅದರಲ್ಲಿಯೇ ಮನೆಯ ಸಂಸಾರ ನಡೆಯುತ್ತಿತ್ತು. ತನ್ನ ಹೆಂಡತಿಯನ್ನು ಎಷ್ಟು ತೋರಿಸಿದರು ಗುಣವಾಗದೇ ಸಾವನ್ನಪ್ಪುತ್ತಾಳೆ. ನಂತರ ಕೆಲದಿನಗಳ ನಂತರ ಹೋರಿಯು ತೀರಿ ಹೋಗುತ್ತದೆ. ಸಿದ್ದೇಗೌಡ ನಿರ್ಗತಿಕನಾಗಿ ದೊಡ್ಡಟ್ಟಿಗೌಡನ ಹತ್ತಿರ ಸಾಲ ತೆಗೆದುಕೊಂಡು

ಬಂದು ಭಾಗ್ಯಳ ಮದುವೆ ರಾಜನೊಂದಿಗೆ ಮಾಡುತ್ತಾನೆ. ರಾಜ ಆಕೆಯನ್ನು ಹೊಡೆದು ಸಾಯಿಸುತ್ತಾನೆ. ಕೊನೆಯಲ್ಲಿ ಆಕೆಯ ಹೆಣ ಸುಡುತ್ತಾ ವಿವಿಧ ರೀತಿಯಲ್ಲಿ ಕಾಣತೊಡಗುತ್ತದೆ.

ನಿರೂಪಕ ತನ್ನ ಹೊಸ ಜೀವನದ ಹೊಸ್ತಿಲಲ್ಲಿ ಕಾಲಿಡುತ್ತಿರುವಾಗಲೇ ಸಂಭವಿಸುವ ಈ ಘಟನೆ ಅವನ ಮನಸ್ಸಿನ ಮೇಲೆ ಸಹಜವಾಗಿಯೇ ಆಳವಾದ ಪರಿಣಾಮವನ್ನು ಬೀರುತ್ತದೆ. ನಿರೂಪಕನಾದವನು ಕಥೆಯ ಏನೂ ಅಗುವುದಿಲ್ಲವೆನೋ ಎಂಬ ದೃಷ್ಟಿಯಲ್ಲಿ ನಿರೂಪಿಸುತ್ತಾ ನಯವಾಗಿಯೇ ಸಿದ್ದೇಗೌಡನ ಸಂಸಾರದ ಮೂರು ಜೀವನಗಳನ್ನು ಕಳೆಯುವುದು ಕತೆಯ ತಂತ್ರಗಾರಿಕೆ ಎನ್ನಬಹುದು ಹಾಗೆಯೇ ದಲ್ಲಾಳಿ ಕರಿಯ ಭಾಗ್ಯಳನ್ನು ವಿವಾಹ ಮಾಡಿಸುವುದು ವಿವಾಹಕ್ಕೆ ಹಣವನ್ನು ತಂದು ಸಿದ್ದೇಗೌಡನನ್ನು ಸಾಲಗಾರನನ್ನಾಗಿ ಮಾಡಿ ಆತನನ್ನು ಮಾನಸಿಕವಾಗಿ ಭಿನ್ನವಣ್ಣಾಗಿ ಮಾಡುವುದು ಸಹ ತಂತ್ರಗಾರಿಕೆಯಾಗಿದೆ. ಅಲ್ಲಲ್ಲಿ ಸಂಭಾಷಣೆಯ ಮುಖಾಂತರ ನಿರೂಪಿಸಲಾಗಿದೆ. ಈ ಕಥೆಯು ಒಂದು ಸಂಸಾರದ ಸ್ಥಿತಿಗತಿಯನ್ನು ಕಟ್ಟಿಕೊಡುತ್ತದೆ. ಹಳ್ಳಿಯಲ್ಲಿ ನಡೆಯುವ ಹಾಗೂ ದುಃಖದಿಂದ ನಡೆಯುವ ಸಂಸಾರಗಳ ಸ್ವರೂಪವೆನೆಂಬುದನ್ನು ಪ್ರತಿಬಿಂಬಿಸುತ್ತದೆ. ಈ ಕಥೆಯು ಬಡತನವನ್ನು ಸಮವಾಗಿ ಅನುಭವಿಸುವ ಅಂಶವನ್ನು ತಿಳಿಸಿದೇ. ಆರ್ಥಿಕವಾಗಿ ಪ್ರಬಲರಾಗಿರಬೇಕು ಹಂಗಾದರೆ ಯಾವುದೇ ತೊಂದರೆಗಳು ಬರುವುದಿಲ್ಲ ಎಂಬುದನ್ನು ತಿಳಿಯಬಹುದು.

**ಆಸಕ್ತಿ:**

ಈ ಕಥೆಯು ತಂದೆ ತಾನು ಸತ್ತ ಮೇಲೆ ಮಗನಾದವನು ಏನು ಮಾಡಬೇಕು. ಜೋತೆಗೆ ಇಬ್ಬರ ಹೆಂಡತಿಯರ ಕಿತ್ತಾಟವನ್ನು ಬೀಚನಹಳ್ಳಿ ಅವರು ಆಸಕ್ತಿ ಕಥೆಯಲ್ಲಿ ಕಟ್ಟಿಕೊಡುತ್ತಿದ್ದಾರೆ. ಕಥೆಯಲ್ಲಿ ಕತೆಗಾರರೆ, ನಿರೂಪಕರಾಗಿ ಪಾತ್ರ ವಹಿಸಿದ್ದಾರೆ. ಇಲ್ಲಿ ಬರುವ ಎಲ್ಲಾ ಪಾತ್ರಗಳ ಹೆಸರುಗಳನ್ನು ಕಾರಣವಾಗಿಸಿದ್ದಾರೆ. ನಿರೂಪಕರು ಒಬ್ಬ ವಿದ್ಯಾವಂತನನ್ನು ಮುಂದಿಟ್ಟುಕೊಂಡು ಕತೆಯನ್ನು ಮುಂದು ವರೆಸಿಕೊಂಡು ಹೋಗಿದ್ದಾನೆ. ಓದುಗ ವರ್ಗವು ವಿದ್ಯಾವಂತನ ಜೋತೆಯಲ್ಲಿಯೇ ಮನಸು ಅಲೆದಾಡುವಂತೆ ಮಾಡುತ್ತದೆ. ಇದು ಕತೆಗಾರರು ಮಾಡಿಕೊಂಡ ತಂತ್ರ ಅಥವಾ ಕಥೆಯ ವಿನ್ಯಾಸವಾಗಿದೆ. ಇಲ್ಲಿಯ ಪಾತ್ರಗಳು ಹೆಚ್ಚು ಸಂಭಾಷಣೆಯಲ್ಲಿ ತೊಡಗದೆ ನಿರೂಪಕರೆ ಹೆಚ್ಚು ವಿಷಯವನ್ನು ಸರಳವಾಗಿಯೇ ಮುಂದೆ ಏನಾಗುತ್ತದೋ ಎಂಬ ಉತ್ಸುಕತೆಯನ್ನು ಮುಡಿಸುವತ್ತ ಕೊಂಡೊಯುತ್ತದೆ

ಕತೆಯು ಪ್ರಾರಂಭದಲ್ಲಿ ಸಾಯುವ ಮುನ್ನ ತಂದೆಯು ಬೆಂಗಳೂರಿನಲ್ಲಿರುವ ತನ್ನ ಸಣ್ಣ ಹೆಂಡತಿ ಮಗನ ಕರೆಸಿ ಅವನಲ್ಲಿ ತನ್ನ ಮನಸ್ಸಿನಲ್ಲಿದ್ದದ್ದನ್ನು ಹೇಳಿಕೊಳ್ಳುತ್ತಾನೆ. ಅಂದರೆ ಎರಡು ಸಂಸಾರಗಳನ್ನು ಒಂದು ಮಾಡಬೇಕು ಎಂದೇಳಿ ಸಾಯುತ್ತಾನೆ. ಇದಕ್ಕೆ ಕಥೆಗಾರನು ರೂಪಿಸಿಕೊಂಡಿರುವ ತಂತ್ರಗಾರಿಕೆಯು ಅತ್ಯಂತ ಸಾಂದರ್ಬಿಕವಾಗಿದೆ. ತಂದೆಯ ತಿಥಿಯನ್ನು ಮಾಡುವಂತಹ ಸಂದರ್ಭದಲ್ಲಿ ಎಲ್ಲರನ್ನು ಒಂದು ಗೂಡಿಸಬಹುದು ಎಂಬ ದೃಷ್ಟಿಯಿಂದ ತಿಥಿಯ ಎಲ್ಲಾ ಜವಾಬ್ದಾರಿಯನ್ನು ಮಗನೇ ವಹಿಸಿಕೊಂಡು, ತಿಥಿಯನ್ನು ಸುಸುತ್ರವಾಗಿ ಮುಗಿಸಿ ತನ್ನ ತಂದೆಗೆ ಇನ್ನೊಬ್ಬ ಹೆಂಡತಿಯಿದ್ದಳು. ನನಗೆ ಗಂಗಣ್ಣನೆಂಬ

ಅಣ್ಣನಿದ್ದಾನೆ ಎಂಬುದನ್ನು ಜನತೆಯಲ್ಲಿ, ನಿಜಾಂಶವನ್ನು ಸಾಬೀತು ಪಡಿಸುವಲ್ಲಿ ಸಫಲನಾಗುತ್ತಾನೆ. ಈ ಕಥೆಯಿಂದ ಒಡೆದ ಸಂಸಾರಗಳನ್ನು ಒಂದು ಮಾಡುವ ಅಂಶವನ್ನು ಮನಗಾಣಬಹುದು. ಇದು ಸಾಮಾಜಿಕವಾಗಿ ಒಳ್ಳೆಯದು ಹಾಗೂ ಭಾವನಾತ್ಮಕವಾದ ಸಂಬಂಧ ಬೆಸೆಯುವಲ್ಲಿ ಕಥೆಯು ಬಹುಮುಖ್ಯ ಪಾತ್ರವಹಿಸಿದೆ.

**ಸಂಬಂಧ:**

ಈ ಕಥೆಯು ವಿದ್ಯಾಭ್ಯಾಸ ಕಲಿಸುವ ಮೇಷ್ಟುಗಳ ಬಗ್ಗೆ ಇದ್ದು ಅವರು ಹಳ್ಳಿಗಳಲ್ಲಿ ನಡೆಸುವ ಬಡ್ಡಿ ವ್ಯವಹಾರಗಳು, ವಿದ್ಯಾರ್ಥಿಗಳನ್ನು ಶಿಕ್ಷಿಸುವ ಪರಿ ಅದರಿಂದ ನೋವು ಅನುಭವಿಸುವ ವಿದ್ಯಾರ್ಥಿಗಳ ಸಂಕಟದ ರೀತಿನೀತಿಯನ್ನು ಈ ಕಥೆಯು ಕಟ್ಟಿಕೊಡುತ್ತದೆ. ಈ ಕಥೆಯಲ್ಲಿ ಹೆಚ್ಚು ತಂತ್ರಗಾರಿಕೆಯನ್ನು ಅಳವಡಿಸಿದೇ ನೇರವಾಗಿ ಕಣಕ್ಕಿಳಿಯುವುದರೊಂದಿಗೆ ಕಥೆಯನ್ನು ಕಟ್ಟಿಕೊಟ್ಟಿದ್ದಾರೆ. ಕಥೆಯಲ್ಲಿ ಸಂಭಾಷಣೆಗೆ ಹೆಚ್ಚು ಅನುಮತಿ ನೀಡಲಾಗಿದೆ. ನಂಜಯ್ಯ ಮೇಷ್ಟ್ರು ಬಡ್ಡಿ ವ್ಯವಹಾರದಲ್ಲಿ ತೊಡಗಿ, ಲಿಂಗಣ್ಣನೆಂಬುವನಿಗೆ ಸಾಲ ನೀಡಿದ್ದನು. ಆತನು ಮಳೆ ಬೆಳೆಯಾಗದೇ ಸಾಲಕೊಡದಿದ್ದರಿಂದ ಆತನ ಮಗ ಗೋವಿಂದನನ್ನು ಶಿಕ್ಷಿಸುವ ಪರಿ ಶಿಕ್ಷಕರಿಗೆ ಧನಪಿಶಾಚಿ ಎಂಬ ಪಟ್ಟಿ ಕಟ್ಟಿದ್ದಾರೆ. ಕಥೆಯು ಮೇಷ್ಟ್ರು-ವಿದ್ಯಾರ್ಥಿಗಳ ಮಾತುಕತೆಯಿಂದ ಪ್ರಾರಂಭವಾಗಿ ಗೋವಿಂದನನ್ನು ಶಿಕ್ಷಿಸುವರೊಂದಿಗೆ ಮುಗಿಯುತ್ತದೆ. ಈ ಕಥೆಯಿಂದ ಸಮಾಜದಲ್ಲಿ ಶಿಕ್ಷಕರು ನಡೆಸುವಂತ ಬಡ್ಡಿ ವ್ಯವಹಾರ ವಿದ್ಯಾರ್ಥಿಗಳ ಮೇಲೆ ಯಾವ ರೀತಿಯ ಪರಿಣಾಮವನ್ನುಂಟು ಮಾಡುತ್ತಾರೆ ಎಂಬುದನ್ನು ಗುರುತಿಸಲು ಈ ಕಥೆಯು ಬಹುಮುಖ್ಯ ಪಾತ್ರವಹಿಸಿದೆ.

**ಕಳಕಳಿ:**

ಈ ಕಥೆಯು ಪ್ರಮುಖವಾಗಿ ಬಡತನ ಹಾಗೂ ಶಿಕ್ಷಣ ಪಡೆಯಬೇಕು ಎನ್ನುವ, ಹುಡುಗನ ಒಂದು ದಿನದ ರಾತ್ರಿಯ ತುಮುಲತೆ ಅಥವಾ ಪರಿಪಾಠವನ್ನು ಕಟ್ಟಿಕೊಡುವುದರಲ್ಲಿ ಯಶಸ್ವಿಯಾಗಿದೆ. ಬೀಚನಹಳ್ಳಿ ಅವರು ಸರಳವಾದ ಹಳ್ಳಿ ಭಾಷೆಯನ್ನು ಬಳಸಿಕೊಂಡಿದ್ದಾರೆ. ಅಷ್ಟೇನು ಗ್ರಾಂಥಿಕ ಭಾಷೆಯ ಶಬ್ದಗಳನ್ನು ಬಳಸಿಕೊಂಡಿಲ್ಲ. ಕಥೆಯಲ್ಲಿ ಕಥೆಗಾರರೇ ನಿರೂಪಕರಾಗಿದ್ದಾರೆ. ಕಥೆಯ ಅರ್ದದಷ್ಟು ಭಾಗ ಸಂಭಾಷಣೆಯಿಂದ ಕೂಡಿದೆ. ರಾಮಣ್ಣ ಒದುತ್ತಿರುವ ಹುಡುಗ ಈತನು ನಾಳೆ ಹೋಗಿ ಇಂಗ್ಲೀಷ್ ವಿಷಯದ ಪರೀಕ್ಷೆ ಬರೆಯಬೇಕು. ಮನೆಯಲ್ಲಿ ರಾತ್ರಿ ಓದಲು ಬೆಳಕಿಲ್ಲ. ಚಿಮಣಿ ಬುಡ್ಡಿ ಅಚ್ಚಲು ಬೆಂಕಿಕಡ್ಡಿ ಇರುವುದಿಲ್ಲ ಅದನ್ನು ತೆಗೆದುಕೊಂಡು ಬರಲು ಕಾಳಣ್ಣನ ಕಡೆ ಹೋಗುತ್ತಾನೆ. ತರುವದೊರೋಳಗೆ ತನ್ನ ಮನೆಯ ಹುಂಜ ಕುಗುತ್ತದೆ. ನಂತರ ಬೆಳಕಾದ ಮೇಲೆ ತಾನು ದಿನ ನಿತ್ಯ ಕಾರ್ಯದಲ್ಲಿ ತೋಡಗುತ್ತಾನೆ. ಹೊಲಕ್ಕೆ ಹೋಗಿ ಹುಲ್ಲು ಸೌದೆ ತೆಗೆದುಕೊಂಡು ಬಂದು ಪರೀಕ್ಷೆಗೆ ಹೋಗಬೇಕು. ಮನೆಗೆ ಬಂದು ಪರೀಕ್ಷೆಗೆ ತಯಾರಾಗುತ್ತಾನೆ. ತನ್ನತ್ರ ಪೆನ್ನು ಇಲ್ಲದಿರುವುದನ್ನು ತನ್ನ ತಾಯಿಯತ್ರ ಹೇಳುತ್ತಾನೆ. ಅದನ್ನು ಆಕೆಯು ತನ್ನ ಗಂಡನತ್ರ ಹೇಳುತ್ತಾಳೆ. ಆಗ

ಎಮ್ಮೆಯನ್ನು ಕಳೆದುಕೊಂಡ ತನ್ನ ತಂದೆ ಸಿಟ್ಟಿನಿಂದ ಇಂದು ವರ್ಷದ ಹಿಂದೆ ಕೊಡಿಸಿದ್ದ 'ಆಸೋಕ' ಪೆನ್ನು ಏನು ಮಾಡಿದೆ ಎಂದು ಕೇಳುತ್ತಾನೆ. ನಂತರ ತಾಯಿಯು ಪಕ್ಕದ ಮನೆಯ ಈರಕ್ಕನಿಗೆ ಹುಂಜವನ್ನು ಕೊಟ್ಟು ಹಣ ಕೇಳಿ ತೆಗೆದುಕೊಂಡು ಬರಲು ಹೋಗುತ್ತಾಳೆ. ತಾಯಿ ಬರುವುದನ್ನೆ ಕಾಯುತ್ತಾ ನಿಂತಿರುತ್ತಾನೆ ರಾಮಣ್ಣ.

ಬೀಚನಹಳ್ಳಿ ಅವರು ಕಥೆಯನ್ನು ಅತ್ಯಂತ ತಂತ್ರಗಾರಿಕೆಯಿಂದ ರಚಿಸಿದ್ದಾರೆ. ಇಲ್ಲಿ ಪ್ರಸ್ತುತ ಸಂದರ್ಭಕ್ಕೆ ಬೇಕಾಗುವಂತಹ ಬೆಂಕಿಕಡ್ಡಿ, ಕತ್ತಲು, ಕಾಳಣ್ಣನಿಂದ ಬೆಂಕಿಕಡ್ಡಿ ಸಿಕ್ಕಾಗ ಬೆಳಕಾಗುವುದು, ಕೋಳಿ ಕೂಗುವುದು, ಶಾಲೆಗೆ ಹೊರಡಲು ನಿಂತಾಗ ಪೆನ್ನ ಇಲ್ಲದಾಗಿಸಿರುವುದು ಇದು ಕಥೆಗಾರನ ತಂತ್ರಗಾರಿಕೆಯಾಗಿದೆ. ೫ನೇ ತರಗತಿ ಓದುವ ಹುಡುಗನಿಗೆ ಯಾವುದು ಕಷ್ಟವಾದ ವಿಷಯ ಎಂಬುದನ್ನು ಗುರುತಿಸಿದ್ದಾರೆ. ಇದು ಕಥೆಯಲ್ಲಿ ಬರುವ ರಾಮಣ್ಣನನೊಬ್ಬನ ಕಷ್ಟ ವಿಷಯವಲ್ಲ ಇಂಗ್ಲೀಷು ಅದು ಇಂದಿನ ಹಳ್ಳಿಯ ವಿದ್ಯಾರ್ಥಿಗಳಲ್ಲಿಯು ಸಹ ಕಂಡುಬರುವ ಸಮಸ್ಯೆಯಾಗಿದೆ. ಗ್ರಾಮೀಣ ಪ್ರದೇಶದ ಹುಡುಗರು ಇಂಗ್ಲೀಷ್ ವಿಷಯದಲ್ಲಿ ಪರಿಣಿತರಾಗಿರುವುದಿಲ್ಲ ಶಿಕ್ಷಕರು ಗಮನ ಕೊಟ್ಟು ಕಲಿಸುವುದಿಲ್ಲ. ಬಹುಶಃ ಇಂತಹ ಅನುಭವ ಕಥೆಗಾರರಾದ ಬೀಚನಹಳ್ಳಿಯವರು ಸಹ ಅನುಭವಸಿರಬಹುದು ಎಂದೇನಿಸುತ್ತದೆ. ಅಂದಹಾಗೆ ಕೊನೆಯಲ್ಲಿ ರಾಮಣ್ಣ ಪರೀಕ್ಷೆಯನ್ನು ಬರೆಯಲು ಪೆನ್ನು ಸಿಗುತ್ತದೆಯೋ ಇಲ್ಲವೋ ಎಂಬುದು ಶೂನ್ಯವಾಗಿ ಕಥೆ ಕಡೆಯಾಗಿದೆ. ಇದು ಕಥೆಗೆ ಶಕ್ತಿಯನ್ನು ತಂದು ಕೊಡುತ್ತದೆ. ರಾಮಣ್ಣ ರಾತ್ರಿಯಲ್ಲ ಓದಲು ಪರಿತಪಿಸಿದ ರೀತಿ, ನಿದ್ದೆಗಟ್ಟಿದ್ದು ಹಾಗೂ ಪರೀಕ್ಷೆ ಎನ್ನುವ ಒಂದು ಮಾನಸಿಕ ರೋಗ, ಇಂಗ್ಲೀಷ್ ಎಂಬ ವಿಷಯ ಈ ಎಲ್ಲಾ ಅಂಶಗಳಿಗೆ ಉತ್ತರ ದೊರಕಿಸಬೇಕಿತ್ತು. ಅಂದರೆ ತಾಯಿಯು ಪೆನ್ನು ತೆಗೆದು ಕೊಟ್ಟ ಮೇಲೆ ಪರೀಕ್ಷೆ ಬರೆದು, ಪರೀಕ್ಷೆಯಲ್ಲಿ ಒಳ್ಳೆಯ ಅಂಕಗಳಿಸಿ ಪಾಸಾಗುವ ಅಂಶವನ್ನು ಕೊನೆಯಲ್ಲಿರಿಸಬೇಕಿತ್ತು.

**ಕರಿಮಣ್ಣಿನ ಗೊಂಬೆಗಳು:**

ಈ ಕಥೆಯಲ್ಲಿ ಹೊಸ ಶಿಕ್ಷಣ ಪಡೆದ ಯುವಕರು ಮಾಟ ಮಂತ್ರಗಳ ಮೋಸವನ್ನು ಬಯಲು ಮಾಡುವ ಸನ್ನಿವೇಶವನ್ನು ಕಟ್ಟಿಕೊಟ್ಟಿದ್ದಾರೆ. ಈ ಕಥೆಯ ಒಳಗೆ ಚಿತ್ರಣಗೊಂಡ ಪರಿಸರ ಗ್ರಾಮೀಣವಾದದ್ದು. ಪಾತ್ರ, ಸನ್ನಿವೇಶ, ಘಟನೆಗಳು ಗ್ರಾಮ ಪರಿಸರಕ್ಕೆ ಸಂಬಂಧಿಸಿದ್ದರೂ, ಕಥೆಯ ತಿರುಳಿನಲ್ಲಿ ವೈಚಾರಿಕತೆ ಸೇರಿಕೊಂಡಿದೆ. ಇದು ಅನುಭವವು ಅನ್ನುವುದಕ್ಕಿಂತ ಕಟ್ಟಿಕೊಂಡ ಅನುಭವವಾಗಿದೆ. ಭೌದ್ಧಿಕತೆಯೇ, ವೈಚಾರಿಕತೆಯೇ ಮೂಲ ಧನವಾಗಿದೆ. ಇಲ್ಲಿ ಅನುಭವದ ವಿಸ್ತಾರಕ್ಕೆ ಸಾಕ್ಷಿಯಾದ ಕಥೆಯಾಗಿ ಇದು ಕಾಣುತ್ತದೆ. ಈ ಎರಡು ನೆಲೆಯ ಕಥೆಯ ಗುಣಮಟ್ಟದಲ್ಲಿ ವ್ಯತ್ಯಾಸಗಳಾಗಲಿ ಏರುಪೇರುಗಳಾಗಿ ನಿಲ್ಲುವುದಿಲ್ಲ. ಇದೊಂದು ಗುಣಾತ್ಮಕ ಕಥೆ ಆಗಿದೆ.

'ಕರಿಮಣ್ಣಿನ ಗೊಂಬೆಗಳು' ಕಥೆಯಲ್ಲಿ ಬರುವ ಕಾಡಣ್ಣ ಒಬ್ಬ ಹೆಸರಾಂತ ವ್ಯವಸಾಯಗಾರನಾಗಿದ್ದನು. ಊರಲ್ಲಿ ದೊಡ್ಡ ಕುಳ ಎಂದೆನೆಸಿಕೊಂಡಿದ್ದನು. ಇದಕ್ಕೆಲ್ಲಾ ಕಾರಣ ಹಿಪ್ಪನೇರಳೆ. ಒಂದು ಸಾರಿ ಇದಿಂದ ಸರಿಯಾದ ಫಲ ಬರದಿದ್ದಂರಹ ಸಂದರ್ಭದಲ್ಲಿ

ಮೂಢನಂಭಿಕೆಯನ್ನು ಮೈಗೂಡಿಸಿಕೊಂಡು ಬಂದಿದ್ದ ಕಾಡಣ್ಣ ದುರ್ಗದ ಪೂಜಾರಯ್ಯನ ಹತ್ತಿರ ಕೇಳಿಸಿದಾಗ ನಿನ್ನ ದೊಡ್ಡ ಹೆಂಡತಿಯು ನಿನ್ನ ಹೊಲಕ್ಕೆ ಮಾಟ ಮಾಡಿಸಿದ್ದಾಳೆ ಎಂದಾಗ ಕಾಡಣ್ಣನ ಹೊಲದಲ್ಲಿ ಗೊಂಬೆಗಳನ್ನು ಕೀಳಲು ಹೋದಾಗ ಕಾಡಣ್ಣನ ಮಕ್ಕಳಾದ ಗಂಗಣ್ಣ, ಮೂಡ್ಲಿ, ರಾಜ ಹಾಗೂ ಊರಿನ ಜವರ, ಶಂಕರ ರಾಜ ಸೇರಿಕೊಂಡು ಪೂಜಾರಯ್ಯನನ್ನು ನಾಲ್ಕು ಬಾರಿಸಿ ಮಾಟಮಂತ್ರಗಳ ಮೋಸವನ್ನು ಬಯಲಿಗೆಳೆಯುತ್ತಾರೆ. ಇಲ್ಲಿ ಕಥೆಗಾರರು ಜನತೆಗೆ ಒಳ್ಳೆಯ ಸಂದೇಶವನ್ನು ನೀಡಿದ್ದಾನೆ. ಮಾಟ ಮಂತ್ರಗಳನ್ನು ನಂಬಬಾರದು ನೈಸರ್ಗಿಕವಾಗಿರುವುದಕ್ಕೆ ನಮ್ಮ ಮನಸ್ಸಿನ ಭಾವನೆಗಳನ್ನು ಸರಿಯಾಗಿ ಬರೆಗಲ್ಲಿ ಹಾಕಿ ನೋಡಬೇಕು. ಭಾಷೆಯು ಸರಳವಾದ ಸಹಜವಾದ ಭಾಷೆಯನ್ನು ಬಳಸುತ್ತಾ ಅಲ್ಲಲ್ಲಿ ಪಾತ್ರಗಳ ಸಂಭಾಷಣೆಯನ್ನು ಇಟ್ಟಿದ್ದಾರೆ. ಬೀಚನಹಳ್ಳಿ ಅವರು ಹಾಗೂ ಹೊಸತಲೆಮಾರಿನ ಕಥೆಗಾರರು ಇಂತಹ ಕಥೆಗಳನ್ನು ಹೆಚ್ಚು-ಹೆಚ್ಚು ಬರೆಯಬೇಕು ಎಂಬುವುದು ನನ್ನ ಅಭಿಪ್ರಾಯವಾಗಿದೆ.

**ದನಿ:**

ಬೀಚನಹಳ್ಳಿ ಅವರು ಈ ಕಥೆಯಲ್ಲಿ ಬಡತನ ಹಾಗೂ ಶಿಕ್ಷಣದ ಸ್ಥಿತಿ-ಗತಿಯನ್ನು ಕಟ್ಟಿ ಕೊಡುವುದರ ಜೋತೆಗೆ ತಾಯಿ ಮಕ್ಕಳ ಮಮಕಾರವನ್ನು ಕಟ್ಟಿಕೊಟ್ಟಿದ್ದಾರೆ. ಇದರ ಇನ್ನೊಂದು ವೈಶಿಷ್ಟ್ಯವೆಂದರೆ ಅವರು ಹೆಣ್ಣು ಪಾತ್ರಗಳನ್ನು ಕಂಡರಿಸುವ ರೀತಿ ಈ ಕತೆಯಲ್ಲಿ ಹೆಣ್ಣಿನ ತಾಯ್ತನದ ವಿವಿಧ ಮುಖಗಳು ಮೈತುಂಬಿದಂತೆ ಚಿತ್ರಿತವಾಗಿವೆ. ಹೆಣ್ಣಿನ ಇತರ ಮುಖಗಳ ಬಗ್ಗೆ ಕತೆಗಾರರಿಗೆ ಅಷ್ಟು ಆಸಕ್ತಿ ಇದ್ದಂತಿಲ್ಲ. ಮಕ್ಕಳ ಬಗ್ಗೆ ಅಲವತ್ತುಕೊಳ್ಳುವ ತಾಯಿ, ತಾನು ಸೇರಿದ ಮನೆಯ ಏಳಿಗೆಯನ್ನು ಬಯಸುವ ತಾಯಿ ತನ್ನ ಗಂಡನು ಆಲಸಿ, ಸೋಮಾರಿ, ಕೆಲಸಕ್ಕೆ ಉರಗದವನಾದರೂ ಮನೆತನ ಸಾಗಿಕೊಂಡು ಹೊಗಲು ಛಲದಿಂದ ದುಡಿಯುವ ಮನೆಯನ್ನು ಪೊರೆಯುವ ತಾಯಿ ಹೀಗೆ ಹೆಣ್ಣಿನ ಪಾತ್ರದಲ್ಲಿ ಈ ಕಥೆಯಲ್ಲಿ ಕೆಂಚವ್ವಳಿದ್ದಾಳೆ ನಮ್ಮ ಹಳ್ಳಿಗೆ ಶಾಲೆಯನ್ನು ತರಬೇಕೆಂದು ಬೋರೆಗೌಡರು ತಮ್ಮ ಜಗುಲಿಯ ಮೇಲೆಯೇ ಶಾಲೆ ನಡೆಸುವುದು ಶಿಕ್ಷಣದ ಬಗ್ಗೆ ಅರಿವು ಮೂಡುತ್ತಿದೆ. ಹಳ್ಳಿಗರಲ್ಲಿ ಜ್ಞಾನ ಬೆಳೆಯುತ್ತಿದೆ ಎಂಬ ಅಂಶ ಕಂಡು ಬರುತ್ತದೆ. ಶಿಕ್ಷಣ ಬದಲಾವಣೆ ಮಾಡುತ್ತದೆ. ಎಂಬುದನ್ನು ಅರೆತ್ತಿದ್ದಾರೆ.

**ಸಂಗಾತಿಗಳು:**

ಈ ಕತೆಯಲ್ಲಿ ಎರಡು ಕುಟುಂಬಗಳ ಸಹಕಾರ ಸಹಾಯದ ಪರಿಕಲ್ಪನೆಯನ್ನು ಕಟ್ಟಿಕೊಟ್ಟಿದ್ದಾರೆ. ಎರಡು ಧರ್ಮದ ಜಾತಿಯ ಜನರು ಒಬ್ಬರಿಗೊಬ್ಬರು ಒಂದಾಗಿ ಸಹಬಾಳ್ವೆಯಿಂದ ಸಹಕಾರ ಮಾಡುವ ದೃಷ್ಟಿಗಳನ್ನು ಕಾಣಬಹುದು. ಆಸ್ತಿಪಾಳ್ಯದ 'ಚೆನ್ನಯ್ಯ' ಹೆಂಡತಿ 'ನಂಜವ್ವ' ಮಕ್ಕಳು 'ತಿಮ್ಮೇಗೌಡ', 'ಜವರ', 'ರಾಜಣ್ಣ', ಚಂದ್ರಪ್ಪ, ಭಾಗ್ಯ ಇವರದು ಒಂದು ಸಂಸಾರ.

ಅಬ್ದುಲ್ ಅಜೀದ್‌ಸಾಬ್ ಪತ್ನಿ ಪಾತಿಮಾ ಮಗಳು ಜಮೀಲ ಇವರದು ಒಂದು ಚಿಕ್ಕದಾದ ಮುಸ್ಲಿಂ ಕುಟುಂಬ. ಈ ಎರಡು ಕುಟುಂಬಗಳ ಸಹಕಾರ ಹೊಂದಾಣಿಕೆಯನ್ನು 'ಸಂಗಾತಿಗಳು' ಈ ಕಥೆಯಲ್ಲಿ ಕಾಣಬಹುದಾಗಿದೆ. ಬಡತನದಿಂದ ಕೂಡಿದ ಸಂಸಾರ ಚೆನ್ನಯ್ಯನದು. ಹೊಟ್ಟೆ-ಬಟ್ಟೆಗೆ ಇರುವ ಮಿಡ್ಲಸ್ಕೂಲ್ ಮಾಸ್ತರ ಅಬ್ದಿಲ್ ಅಜೀದ್‌ನ ಚಿಕ್ಕ ಕುಟುಂಬ.

ಕಥೆಯಲ್ಲಿ ಚೆನ್ನಯ್ಯನ ಮಗ 'ರಾಜಣ್ಣ'ನದೇ ವಿಚಾರ ಮೂಡಿ ಬಂದಿದೆ. 'ರಾಜಣ್ಣ' 'ಎಸ್. ಎಸ್. ಎಲ್. ಸಿ' ಓದುತ್ತಿದ್ದಂತ ವಿದ್ಯಾರ್ಥಿ. ನಲವತ್ನಾಲ್ಕು ಜನ ವಿದ್ಯಾರ್ಥಿಗಳು ಪರೀಕ್ಷೆಗೆ ಕೂತವರು. ಅವರಲ್ಲಿ ಪಾಸಾದವರ ಸಂಖ್ಯೆ ನಾಲ್ಕು ಜನ ಮಾತ್ರ ಆ ನಾಲ್ಕು ಜನರಲ್ಲಿ 'ಚೆನ್ನಯ್ಯ'ನ ಮಗ 'ರಾಜಣ್ಣ'ನೂ ಒಬ್ಬ. ಇತನನ್ನು ಮುಂದೆ ಓದಿಸಿ ಬೇಕೆಂದರೆ ಕೈಯಲ್ಲಿ ಕಾಸಿಲ್ಲ. ಹಿಂದೆ ಎಂದೋ ಒಂದು ದಿನ ಅಬ್ದುಲ್ ಅಜೀದ್ ಹೇಳಿದ ಮಾತು ಜ್ಞಾಪಕಕ್ಕೆ ಬಂದಾಗ ಆತನನ್ನು ಬೇಟಿ ಮಾಡಿ ಮನೆಗೆ ಬರಹೇಳಿ ಅವರ ಹತ್ತಿರ ರಾಜಣ್ಣ ಓದಿನ ವಿಚಾರ ಮಾತನಾಡಿದರು. ಆಗ 'ಅಬ್ದುಲ್ ಅಜೀದ್' ಸಾರ್ ರಾಜಣ್ಣನನ್ನು ಮುಂದೆ ಓದಿಸಲು ಅನುಮತಿ ನೀಡಿ ತಾವೇ ರಾಜಣ್ಣನನ್ನು 'ಬೆಂಗಳೂರಿಗೆ ಕರೆದುಕೊಂಡು ಹೋಗುತ್ತಾರೆ.

ಕತೆಗಾರರು ನಡೆದ ಸಂಗತಿಯನ್ನು ಹೇಳುವುದಕ್ಕೆ ಬಳಸುವ ಭಾಷೆಯೂ 'ವಾಸ್ತವ'ವನ್ನು ದಾಖಲು ಮಾಡುವುದಕ್ಕೆ ಯೋಗ್ಯವಾದ ಭಾಷೆ. ಅಪರೂಪಕ್ಕೊಮ್ಮೆ ಕತೆಗಾರರು ನಡೆದ ಸಂಗತಿಯ ಬಗ್ಗೆ ವ್ಯಾಖ್ಯಾನಗಳು ಸಿಗುತ್ತವೆ. ಇಂಥ ವ್ಯಾಖ್ಯಾನ ಇಲ್ಲದೆ ಕಂಡಷ್ಟನ್ನು ಕಂಡಂತೆ ಮಂಡಿಸುವ ಕತೆಗಳೇ ಚೆನ್ನಾಗಿವೆ ಎನ್ನಿಸುತ್ತದೆ. ವ್ಯಾಖ್ಯಾನ ಭಾಗ ಇಲ್ಲದೆಯೂ ಕರೀಗೌಡರ ಕತೆಯ ಉದ್ದೇಶ ಸ್ಪಷ್ಟವಾಗುವಂತೆಯೇ ಇರುತ್ತದೆ. ಕಥೆಗಾರರು ನಿರೂಪಣೆಯ ಪಾತ್ರವನ್ನು 'ಚೆನ್ನಯ್ಯ'ನಿಗೆ ನೀಡಿದ್ದಾರೆ. ಕಥೆಗಾರರು 'ಚೆನ್ನಯ್ಯ'ನ ಸ್ಥಾನದಲ್ಲಿದ್ದುಕೊಂಡು ಸರಳವಾದ ಭಾಷೆಯಲ್ಲಿ ಕಥೆಯನ್ನು ನಿರೂಪಿಸಿದ್ದಾರೆ. ಕಥೆಗಾರರು ಸಹ ಕಥೆಗಳಲ್ಲಿ ಬರುವ ಪಾತ್ರಗಳ ಜೋತೆ-ಜೋತೆಗೆ ಸಂಭಾಷಣೆಯನ್ನು ನಡೆಸುವ ಯತ್ನ ನಡೆಸಿದ್ದಾರೆ. ಇಂತಹ ಕಥೆಗಳ ಹೊರಬರುವುದು ಅಪರೂಪ. ಪುಸ್ತಕ ಸಂದರ್ಭದಲ್ಲಿ ನಡೆಯುವಂತಹ ಸಂಗತಿಯನ್ನು ಕಟ್ಟಿಕೊಡುವುದು ಕಥೆಗಾರರ ಕರ್ತವ್ಯವಾಗಬೇಕಾಗಿದೆ. ಇದು ನೈಜವಾದ ಸಂಗತಿಯನ್ನು ಒಳಗೊಂಡಿರಬೇಕು. ಕಥೆಯಲ್ಲಿ ಯಾವುದೇ ರೀತಿಯ ರಾಜಕೀಯ ಅಂಶಗಳನ್ನು ಪ್ರತಿಬಿಂಬಿಸುವಂತಿರಬಾರದು, 'ಸಂಗಾತಿಗಳು' ಕಥೆಯಲ್ಲಿರುವಂತೆ ಜಾತಿ-ಜಾತಿಗಳ ನಡುವೆ ಮನುಷ್ಯರ ನಡುವೆ ಭಾವನಾತ್ಮಕ ಸಂಬಂಧವನ್ನು ಬೆಸೆಯುವಂತಿರಬೇಕು. ಮನೋಧರ್ಮ, ಆಶಾಮನೋಭಾವ ಸಾಮಾಜಿಕ ಮೌಲ್ಯವನ್ನು ತಿಳಿಸಿ ಕೊಡುವಂತ ಕಥೆಯಾಗಿದೆ.

**ಜೊತೆಗಾತಿ:**

ಜೊತೆಗಾತಿ ಎಂಬ ಶಬ್ದವೇ ಹೇಳುವಂತೆ ಈ ಕಥೆಯು ಒಂದು ಪ್ರೇಮ ಪ್ರಸಂಗವನ್ನು ಕಟ್ಟಿಕೊಡುತ್ತದೆ. ಕೃಷ್ಣಪ್ಪ-ನೇತ್ರಾವತಿ ಇಬ್ಬರು ಪ್ರೀತಿಸಿದವರು. ಇವರಿಬ್ಬರು ಪ್ರೇಮದಾಟ ಈ ಕಥೆಯಲ್ಲಿ ಮೂಡಿ ಬಂದಿದೆ. ಇವರಿಬ್ಬರ ಪ್ರೀತಿ ಸಮಸ್ಯೆಯ ಸುಳಿಯಲ್ಲಿ ಗಂಡ ಬಿಟ್ಟ ಬಾಲ ವಿಧವೆಯಾಗಿದ್ದಳು. ಇದರಿಂದ ಕೃಷ್ಣಪ್ಪನ ತಂದೆ ಇವರಿಬ್ಬರ ವಿವಾಹಕ್ಕೆ ಅಡ್ಡಗಾಲು ಹಾಕುತ್ತಾನೆ.

ಆದರೆ ರಾಮೇಗೌಡರ ಮಗಳು ನೇತ್ರಾವತಿ ಮತ್ತು ಕೃಷ್ಣಪ್ಪ ಚಿಕ್ಕಂದಿನಿಂದಲೂ ಜೋತೆಗಿದ್ದುಕೊಂಡು ಬಂದವರು. ಚಿಕ್ಕಂದಿನಲ್ಲಿ ಆಡಿದ ಚಲ್ಲಾಟದ ಆಟಗಳು ಅವರಿಬ್ಬರ ಪ್ರೇಮಾಂಕುರಕ್ಕೆ ನಾಂದಿಯಾಯಿತು. ಕೃಷ್ಣಪ್ಪ ಬಿ.ಎ.ಓದಿ ಕೆಲಸ ಸಿಗದೂ ಎಂ.ಎ. ಓದಿಕೊಂಡ ವಿದ್ಯಾವಂತ ಸಭ್ಯಸ್ತನಾಗಿದ್ದನು. ಮನೆಯಲ್ಲಿ ಬಡತನ ಕಿತ್ತು ತಿನ್ನುತ್ತಿತ್ತು. ತಂದೆ ಖಾಯಿಲೆಯಿಂದ ನರಳುತ್ತಿದ್ದನು. ಮನೆಯಲ್ಲಿ ತಂದೆಯದೇ ಕೊನೆಯ ಮಾತಾಗಿತ್ತು. ಕೋನೆಗೆ ಕೃಷ್ಣಪ್ಪನನ್ನು ಕರೆಸಿ ನೇತ್ರಾವತಿಯನ್ನು ಕರೆದುಕೊಂಡು ಬಾ ಎಂದಾಗ ಅವನು ಕರೆದುಕೊಂಡು ಬರುವದರೋಳಗೆ ತಂದೆಯ ಜೀವ ಶಿವನ ಪಾದ ಸೇರಿತು.

ಜೋತೆಗಾತಿ ಕಥೆಯು ಆಶೆಯ ಪ್ರಧಾನವಾದ ವಿಧಾನದಲ್ಲಿ ರಚನೆಗೊಂಡಿದೆ ಇಲ್ಲಿ ಕಥೆಗಾರರು ನಿರೂಪಕನನ್ನು ತಾನೇ ಸೃಷ್ಟಿಸಿಕೊಂಡು ಸಂಭಾಷಣೆಯನ್ನು ಇಡದೇ ಕಥೆಯಲ್ಲಿ ಕೃಷ್ಣಪ್ಪ–ನೇತ್ರಾವತಿ ಇಬ್ಬರನ್ನೇ ಆಧಾರವಾಗಿಟ್ಟುಕೊಂಡು ಕಥೆಯನ್ನು ಕೃಷ್ಣಪ್ಪನೆಂಬ ಪಾತ್ರದಿಂದಲೇ ನಿರೂಪಿಸಿದ್ದಾರೆ. ಪ್ರೀತಿ ಪ್ರೇಮ ಬಡತನ ಎನ್ನುವಂತಾದ್ದು ಸಮಾಜದಲ್ಲಿರುವ ಭೌತಿಕ ಅಂಶಗಳು ಎಂದರೆ ತಪ್ಪಾಗಲಾರದು ಪ್ರೀತಿ ಎನ್ನುವಂತಾದ್ದು ಸಿರಿತನ ಬಡತನ ಯಾವುದನ್ನು ನೋಡದೇ ಬರುವಂತಾದ್ದು. ಇದಕ್ಕೆ ಒಳಗಾದವರು ಮಾನಸಿಕ ಭಿನ್ನತೆಗೆ ಒಳಗಾಗುತ್ತಾನೆ. ಇದು ಸಮಾಜಕ್ಕೆ ಒಳಿತನ್ನು ತಂದು ಕೊಡುವುದಿಲ್ಲ ಎಂಬುದನ್ನು ಬೀಚನಹಳ್ಳಿ ಅವರು ಕೃಷ್ಣಪ್ಪನ ತಂದೆಯ ಸಾವಿನ ರೂಪದಲ್ಲಿ ತಂದು ಕೊಟ್ಟಿದ್ದಾರೆ.

**ಅಭಾವ:**

ಈ ಕಥೆಯ ಶಿರ್ಷಿಕೆಯೇ ಸೂಚಿಸುವಂತೆ ತೊಂದರೆ, ಸಮಸ್ಯೆ, ಸಿಗದಿರುವುದು, ಎಂಬರ್ಥಗಳಿವೆ. ಕಥೆಯಲ್ಲಿ ಮೂರು ರೀತಿಯ ಅಭಾವವನ್ನು ಗುರುತಿಸಲಾಗಿದೆ. ಊರಿನ ಜನತೆಗೆ ಬಾರದಿರುವ ಮಳೆಯ ಅಭಾವ ರಾಜನ ತಾಯಿಗೆ ಸಿದ್ದಗಂಗೆಗೆ ಹೋಗಲು ಹಣದ ಅಭಾವ ಹಾಗೂ ಕೊನೆಯಲ್ಲಿ ರಾಜು ತನ್ನ ಮನೆಗೆ ತಮ್ಮ ಬಂದಾಗ ಮಾಂಸ ತರಲು ಹಣದ ಅಭಾವ ಈ ರೀತಿಯ ಮೂರು ಅಭಾವಗಳು ಕಂಡು ಬರುತ್ತವೆ. ಇದು ಈ ಕಥೆಯ ವಸ್ತುವಾಗಿದೆ.

ಕಥೆಯಲ್ಲಿ ಕಥೆಗಾರರ ನಿರೂಪಕನನ್ನು ಸೃಷ್ಟಿಸಿ ಆತನಿಂದಲೇ ಕಥೆಯನ್ನು ನಿರೂಪಿಸಲೇತ್ನಿಸಿದ್ದಾರೆ. ಪ್ರತಿಯೊಂದು ಪಾತ್ರದ ಸಂಭಾಷಣೆಯನ್ನು ಒಬ್ಬನೇ ನಿರೂಪಿಸುತ್ತಾನೆ ಇದು ವಿಶೇಷತೆ. ಕತೆಯು ಸಮಾಜದಲ್ಲಿರುವ ಪ್ರತಿಯೊಬ್ಬರಿಗೂ ತೊಂದರೆದಲ್ಲಿದ್ದರೂ ಸಹ ಅವನಿಗೆ ತಿಂಗಳ ಕೊನೆಯಲ್ಲಿ ಹಣದ ತೊಂದರೆಯಾಗುತ್ತದೆ. ಒಬ್ಬನಿಂದಲೇ ಕಥೆಯಲ್ಲಿಯ ಪಾತ್ರಗಳಿಗೆ ಜೀವ ತುಂಬುವ ಕೆಲಸ ಮಾಡಲಾಗಿದೆ.

**ಅವಮಾನ:**

ಈ ಕಥೆಯು ಒಂದು ಕುಟುಂಬದ ಒಡೆಯನು ತೀರಿಕೊಂಡಾಗ ಆತನ ತಿಥಿ ಮಾಡುವಾಗ ಕುಟುಂಬದಲ್ಲಿ ನಡೆಯುವ ಸಂಘರ್ಷದ ಬಗ್ಗೆ ತಿಳಿಸುತ್ತದೆ. ಒಂದು ಕುಟುಂಬದ ಸಂಘರ್ಷದ ಸ್ಥಿತಿಗತಿಗೇ ಈ ಕಥೆಯ ವಸ್ತುವಾಗಿದೆ. ಕುರಿಸಿದ್ದೇಗೌಡ ಊರಿನ ಕುಳದಂತೆ ಕಾಣಿಸುತ್ತದೆ.

ಇವರದು ಅವಿಭಕ್ತ ಕುಟುಂಬ. ಕುರಿಸಿದ್ದೇಗೌಡ ಚೆನ್ನವ್ವ ಪತಿ-ಪತ್ನಿಯರು, ಚಂದ್ರಪ್ಪ ಕುಂಟಪ್ಪ, ರಾಜಣ್ಣ, ಸಿದ್ದಯ್ಯ ಇವರು ಮಕ್ಕಳು. ಮುಕುಂದ-ಚಂದ್ರಪ್ಪನ ಮಗ, ಅಂದರೆ ಕುರಿಸಿದ್ದೇಗೌಡ ಚೆನ್ನಪ್ಪನ ಮೊಮ್ಮಗ. ಇವರೆಲ್ಲರೂ ಒಂದೇ ಕುಟುಂಬದ ವಾಸಿಗಳು ಕುರಿಸಿದ್ದೇಗೌಡ ಈಗಾಗಲೇ ತೀರಿಕೊಂಡಿದ್ದಾನೆ. ಹೆಂಡತಿಯಾದ ಚೆನ್ನವ್ವ ತನ್ನ ಗಂಡನ ತಿಥಿಯನ್ನು ಹದ್ದೂರಿಯಾಗಿ ಮಾಡಬೇಕು, ಮಾಂಸದ ಊಟವನ್ನು ಆಕಿಸಬೇಕು ಎಂದುಕೊಂಡಿದ್ದಳು. ಈಕೆಯ ನಿರ್ದಾರವೇ ಕಥೆಗೆ ಕವಲು ನೀಡುತ್ತದೆ. ನಿಂಗಣ್ಣ ಮತ್ತು ಎಮ್ಮೆ ಕಾಳಯ್ಯ ಇದೇ ನಿರ್ದಾರಕ್ಕೆ ಸರಿ ಎನ್ನುತ್ತಾರೆ.

ಈ ಕಥೆಯಲ್ಲಿ 'ತಿಂಗಳ ತಿಥಿ' ಮಾಡಲು ಕುಟುಂಬವೊಂದು ಎಲ್ಲ ಸಿದ್ಧತೆಗಳನ್ನು ಮಾಡಿಕೊಳ್ಳಲು ಯತ್ನಿಸುವಲ್ಲಿ ದಣಿಯತ್ತದೆ ಮಾಂಸದ ಊಟವನ್ನು ತಿಥಿಗಾಗಿ ಮಾಡಲು 'ಮರಿ' ವೊಂದನ್ನು ಬಳಸಲು ಎಲ್ಲರ ಒಪ್ಪಿಗೆ ದೊರೆಯುತ್ತಾದರೂ, ಆ ಕುಟುಂಬದ ಅಣ್ಣತಮ್ಮರ ನಡುವೆ 'ಮರಿ' ನನಗೆ ಸೇರಬಥಕಾದದ್ದು ಎಂಬ ಅಸಮಾದನವು ಪೊಲೀಸ್ ಕಛೇರಿ ತಲುಪುತ್ತದೆ. ಅಣ್ಣತಮ್ಮರ ಜಗಳ ಪೊಲೀಸರ ಕೈಗೆ ಹೋಗಿ ರದ್ಧಾಂತವೇ ಏರ್ಪಡುತ್ತದೆ. ಅಂತಿಮವಾಗಿ ಪೆಟ್ಟು ತಿನ್ನುವವರು ಅಣ್ಣತಮ್ಮರೇ, ಕುಟುಂಬದ ಒಳಗಿನ 'ಮರಿ' ಎಂಬ ಆಸ್ತಿಯೂ ಎಷ್ಟು ದೊಡ್ಡ ಸಮಸ್ಯೆಗೆ ಕಾರಣವಾಗುತ್ತದೆ. ಅದರ ಪರಿಣಾಮವನ್ನು ಕಥೆ ಕಟ್ಟಿಕೊಡುತ್ತದೆ.

ಈ ಕಥೆಯ ನಿರೂಪಣೆಯು ಕಥೆಗಾರನಿದಂಲೇ ನಡೆದಿದೆ. ನಿರೂಪಕರೇ ಅಲ್ಲಲ್ಲಿ ಪಾತ್ರಗಳೊಂದಿಗೆ ಸಂಭಾಷಣೆಯನ್ನು ಸೃಷ್ಟಿಸಿದ್ದಾರೆ. ಪಾತ್ರಗಳು ಜಗಳವಾಡುವಂತಹ ಸಂದರ್ಭದಲ್ಲಿ ಕಥೆಗಾರರು ಅವರನ್ನು ಹ್ಯಾಂಗ ಬೇಕೋ ಹಾಂಗ ಬಳಸಿ ಕೊಂಡಿದ್ದಾನೆ. ಅಂದರೆ ನಿರೂಪಕನಾದವನು ಕಥೆಯಲ್ಲಿ ಬರುವ ಪಾತ್ರಗಳಿಂದಲೇ ಕಥೆಯನ್ನು ಕಟ್ಟುವ ಪ್ರಯತ್ನ ಮಾಡಿ ಯಶಸ್ವಿಯಾಗಿದ್ದಾನೆ. ಈ ಕಥೆಯು ಬರಿ ಕಥೆಯಲ್ಲ. ಬದಲಾಗಿ ಪ್ರತಿಯೊಂದು ಸಂಸಾರದಲ್ಲಿ ನಡೆಯುತ್ತಿರುವ ನಿಜ ಸಂಗತಿಯನ್ನು ಕಥೆಗಾರರು ಕಟ್ಟಿಕೊಟ್ಟಿಕೊಟ್ಟಿದ್ದಾರೆ. ಒಬ್ಬ ವ್ಯಕ್ತಿಯ ಜೊತೆಗೆ ಎಷ್ಟೋ ಭಾವನಾತ್ಮಕ ಸಂಬಂಧ ಹೊಂದಿದ್ದರೂ ಸಹ ಕೆಲವೊಂದು ಸಂದರ್ಭದಲ್ಲಿ ಸ್ವರ್ಥತೆಯನ್ನು ಕಾಪಾಡಿಕೊಳ್ಳುವುದು ತನ್ನ ಧರ್ಮವಾಗಿರುತ್ತದೆ. ಇದನ್ನು ಕಥೆಗಾರರು ಚಂದ್ರಪ್ಪ ಅರ್ಥಾತ್ ಕುಂಟಪ್ಪನಿಂದ ತಿಳಿಸಿಕೊಡಲಾಗಿದೆ. ಈ ಕಥೆಯಿಂದ ಒಂದು ಕುಟುಂಬದಲ್ಲಿರುವ ಒಂದೇ ತಾಯಿ ಹೊಟ್ಟೆಯಲ್ಲಿ ಹುಟ್ಟಿದಂತಹ ಮಕ್ಕಳ ಮನೋಭಾವಗಳು ಹೇಗಿರುತ್ತವೆ ಎಂಬುದನ್ನು ಸ್ಪಷ್ಟ ಚಿತ್ರಣ ನೀಡಿದ್ದಾರೆ. ಪ್ರತಿಯೊಂದು ಸಂಸಾರದಲ್ಲಿ ಇಂತಹ ಕಲಹಗಳು ನಡೆಯುತ್ತಲೇ ಇರುತ್ತವೆ. ಈ ಕಥೆಯು ಇಂತಹ ಕುಟುಂಬದ ಮೇಲೆ ಬಲವಾದ ಪರಿಣಾಮವನ್ನು ಬೀರುತ್ತವೆ.

**ಕೋಳಿಪಾಲು:**

ಈ ಕಥೆಯು ಅಪ್ಪಟ ಗ್ರಾಮೀಣ ಬದುಕಿನ ಅನುಭವಗಳಾಗಿ ಗಂಡು-ಹೆಣ್ಣು, ಕುಟುಂಬ ಮತ್ತು ಊರೊಳಗಿನ ಮನುಷ್ಯ ಸಂಬಂಧಗಳ ಸಂಕೀರ್ಣತೆಯನ್ನು ಒಳಗೊಂಡಿದೆ. ಕಥೆಗಾರರ ಭೌದ್ಧಿಕತೆಗಿಂತ ಅನುಭವದ ಗಾಢತೆ, ಬದುಕಿನ ವಾಸ್ತವ ನೆಲೆಗಳನ್ನು ಬಿಂಬಿಸುವುದೇ ಆಗಿದೆ.

ಕಥೆಯಲ್ಲಿ ಒಂದು ಹಳ್ಳಿಯ ವಿವಿಧ ರೀತಿಯ ಮನಸ್ಸುಗಳುಳ್ಳವರನ್ನು ತಿಳಿಸಿಕೊಡಲಾಗಿದೆ. ಕಥೆಗಾರರು ಇಲ್ಲಿ ಹೆಚ್ಚು ಚಾಣಾಕ್ಷತೆಯನ್ನು ಉಪಯೋಗಿಸಿದ್ದಾರೆ. ಅಂದರೆ ಕಥೆಗಾರರು ಒಂದು ಹಳ್ಳಿಯಲ್ಲಿ ನಡೆಯುವ ನೈಜ ಸಂಗತಿಯನ್ನು ತಿಳಿಸಿಕೊಡಲು ಪಾತ್ರಗಳಿಗೆ ಮಕ್ಕಳನ್ನು ತೆಗೆದುಕೊಂಡಿದ್ದಾರೆ. ಕಥೆಯಲ್ಲಿ ಮಕ್ಕಳು ಕಳ್ಳತನ ಮಾಡಿದರೆ ಹೊರ ಪ್ರಪಂಚದಲ್ಲಿ ಬುದ್ಧಿವಂತರು ದೊಡ್ಡವರೇ ಕಳ್ಳತನ ಮಾಡುತ್ತಾರೆ. ಅದನ್ನು ಕಥೆಗಾರರು ಹಿರಿಯವನಾದ ಕರಡಯ್ಯನ ಮೂಲಕ ತಿಳಿ ಹೇಳಿದ್ದಾರೆ. ಹಿಂದಿನ ಕಾಲದಲ್ಲಿ ಕೆಳವರ್ಗಕ್ಕೆ ಸೇರಿದವರು ಬಡತನದ ಸಂಬಂಧ, ಬಾಯಿರುಚಿಯ ಸಂಬಂಧ ಕಳ್ಳತನವನ್ನು ಮಾಡುತ್ತಿದ್ದುಂಟು. ರಾತ್ರೋರಾತ್ರಿ ಕೋಳಿಯನ್ನು, ಕುರಿ, ಮೇಕೆ, ಹಣ, ಒಡವೆ ಮುಂತಾದವುಗಳನ್ನು ಕಳ್ಳತನ ಮಾಡುತ್ತಿದ್ದರು. ಇದರ ಜೊತೆಗೆ ಹೊಲದಲ್ಲಿದ್ದ ದವಸ ಧಾನ್ಯಗಳನ್ನು ಸಹ ಕದಿಯುತ್ತಿದ್ದರು. ಆದರೆ ಈಗ ಅದು ಸ್ವಲ್ಪ ಬದಲಾಗಿದೆ. ಈಗ ದರೋಡೆ ಮಾಡಿ ಹೆದರಿಸಿ ಕೊಂದು ಹಾಡುಹಗಲೇ ಕಳ್ಳತನ ಮಾಡುತ್ತಾರೆ.

ಕಥೆಗಾರರು ಕಥೆಯಲ್ಲಿ ಚೆನ್ನವ್ವನ ಮಗನ ಮೂಲಕ ಕೋಳಿಯನ್ನು ಕದಿಸುತ್ತಾರೆ. ಇಲ್ಲಿ ಮತ್ತೊಂದು ವಿಶೇಷವೆಂದರೆ ಕೋಳಿಯನ್ನು ಕದ್ದವನೇ ಕಥೆಯನ್ನು ನಿರೂಪಿಸುತ್ತಿರುತ್ತಾನೆ. ಹಳ್ಳಿಯ ಸಂಬಂಧಗಳ ಸ್ವರೂಪವನ್ನು ಈ ಕಥೆಯಲ್ಲಿ ಕಾಣಬಹುದು. ಜೊತೆಗೆ ಅವರ ಮೌಢ್ಯತೆಯನ್ನು ಗುರುತಸಬಹುದು. ಈಗಲೂ ಸಹ ಮನೆಯಲ್ಲಿ ಹಣ ಕಾಣದೇ ಕಳುವಾದರೆ ಯಾರಿಗಾದರೂ ಚೆನ್ನಾಗಿಲ್ಲದಿದ್ದರೆ ದೇವರ ಹತ್ತಿರ ಹೋಗಿ ಅದಕ್ಕೆ ಮೂಡಿಪು ಕಟ್ಟಿ ಬರುವುದು ಶಾಸ್ತ್ರ ಕೇಳಿಸುವುದು ಈಗಲೂ ಹಳ್ಳಿಯಲ್ಲಿ ನಡೆಯುತ್ತಿದೆ. ಕಥೆಯು ವಿನೋದದ ಅಂಶಗಳನ್ನು ತಿಳಿಸುತ್ತಾ, ಕದ್ದವರು ಯಾರು ಎಂಬುದನ್ನು ಗುರುತಿಸಲಾಗಿದೆ. ಚೆನ್ನವ್ವ ಎದುರು ಮನೆಯವಳೇ ಕದ್ದಿರುವುದೆಂದು ತಪ್ಪು ತಿಳಿದು ಪೂಜಾರಯ್ಯನ ಹತ್ತಿರ ಪೂಜೆ ಮಾಡಿಸುವುದು ಇಂದಿಗೂ ಹಳ್ಳಿಯ ಜನತೆ ಮೌಢ್ಯತೆಯಲ್ಲಿದ್ದಾರೆ ಎಂಬುದನ್ನು ಸಾರಿ ಹೇಳುತ್ತದೆ. 'ಕರಿಮಣ್ಣಿನ ಗೊಂಬೆಗಳು' ಕಥೆಯಲ್ಲಿ ಬರುವ ಪೂಜಾರಯ್ಯನ ಮಾತುಗಳು ಒಂದೇ ಆಗಿದ್ದರೂ ಅವು ಸುಳ್ಳು ಎಂಬುದನ್ನು 'ಮೂಡ್ಲಿ' ಮತ್ತು 'ಕರಡಯ್ಯ'ನ ಮೂಲಕ ಸತ್ಯವನ್ನು ಹೊರ ಹಾಕಿಸುವುದರಿಂದ ಕಥೆಗಾರ ಜನತೆಯನ್ನು ಎಚ್ಚರಿಸುವ ಕೆಲಸ ಮಾಡಿದ್ದಾರೆ.

**ಗೌರಿ:**

ಈ ಕಥೆಯು ಒಂದು ಊರಿನಲ್ಲಿ ನಡೆಯುವ ಹಿಂದೂ ಮುಸ್ಲಿಂ ವಿವಾಹದ ಕುರಿತು ಹಾಗೂ ಕೆಲವು ವಿಭಿನ್ನ ರೀತಿಯ ವ್ಯಕ್ತಿಗಳ ಮನಸ್ಥಿತಿಯನ್ನು ಕಟ್ಟಿಕೊಟ್ಟಿದ್ದಾರೆ. ಜೊತೆಗೆ ಹಿಂದಿನ ಕಾಲದಲ್ಲಿ ಕೆಲವು ಜನರು ಯಾವ ರೀತಿಯ ಜೀವನ ನಡೆಸುತ್ತಿದ್ದರು ಎಂಬುದನ್ನು ತಿಳಿಸಿಕೊಡಲಾಗಿದೆ. ಇಲ್ಲಿ ಊರಿನ ಹೆಸರು ಹಾಗೂ ನಿರೂಪಕರ ಹೆಸರನ್ನು ಗೌಣ ಮಾಡಲಾಗಿದೆ. ಬೊಂಡದ ಗುಂಡಮ್ಮ ಈಕೆಯು ಒಂದು ಪುಟ್ಟಿಯಲ್ಲಿ ಎಲೆ, ಅಡಿಕೆ,

ಲವಂಗ, ಏಲಕ್ಕಿ, ಕಡ್ಡಿಪುಡಿ, ಬೆಂಕಿಪೊಟ್ಟಣ, ವಡೆಬೊಂಡ, ಸಕ್ಕರೆ ಮಿಠಾಯಿ, ಚಕ್ಕುಲಿ ಹೀಗೆ ಬಗೆಬಗೆಯ ತಿಂಡಿ ತಿನಿಸುಗಳನ್ನು ಮಾಡುತ್ತಿದ್ದಳು. ಗೌರಿ ಗುಂಡಮ್ಮನ ಎರಡನೆಯ ಮೊಮ್ಮಗಳು. ಈಕೆಯು ಮುಸ್ಲಿಂ ಜನಾಂಗದ ಮಹಮದ್ ಎಂಬುವವನನ್ನು ವಿವಾಹವಾಗಿ ಬೆಂಗಳೂರಿಗೆ ಹೋಗಿದ್ದಳು. ಈ ಕಥೆಯನ್ನು ಕಥೆಗಾರರು ನಿರೂಪಸಿದ್ದರೂ ಸಹ ನಿರೂಪಿಸಿಲ್ಲ ಎಂದೆನಿಸುತ್ತದೆ. ಏಕೆಂದರೆ ಕಥೆಗಾರನ ಹೆಸರನ್ನು ಗೌಣಗೊಳಿಸಿ ಕಥೆಯಲ್ಲಿ ಕಥೆಗಳನ್ನು ಕಟ್ಟಲಾಗಿದೆ. ವಡ್ಡಾರಾಧನೆಯ ಕಥೆಯಲ್ಲಿ ಹೇಗೆ ಕಥೆಗಳನ್ನು ಸೃಷ್ಟಿಸಲಾಗಿದಿಯೋ ಅದೇ ರೀತಿಯಲ್ಲಿ ಇಲ್ಲಿಯು ಸಹ ಕಥೆಯನ್ನು ಹೆಣೆಯಲಾಗಿದೆ.

ಕಥೆಗಳು ಅಪ್ಪಟ ಗ್ರಾಮೀಣ ಬದುಕಿನ ಅನುಭವಗಳಾಗಿ, ಗಂಡು–ಹೆಣ್ಣು, ಕುಟುಂಬ ಮತ್ತು ಊರೊಳಗಿನ ಮನುಷ್ಯ ಸಂಬಂಧಗಳ ಸಂಕೀರ್ಣತೆಯನ್ನು ಒಳಗೊಂಡಿವೆ. ಕಥೆಗಾರರ ಭೌದ್ಧಿಕತೆಗಿಂತ ಅನುಭವದ ಗಾಢತೆ, ಬದುಕಿನ ವಾಸ್ತವ ನೆಲೆಗಳನ್ನು ಬಿಂಬಿಸುವುದೇ ಆಗಿದೆ. ಒಟ್ಟಾರೆಯಾಗಿ ಕಥೆಗಾರರ ಅನುಭವಗಳು ನೈಜ ರೀತಿಯಲ್ಲಿ ನಡೆದಿವೆ ಎಂಬಂತೆ ಕಟ್ಟಿಕೊಡಲಾಗಿದೆ. ಹಳ್ಳಿ ಬದುಕಿನ ಒಳಗೆ ಮನುಷ್ಯ ಸಂಬಂಧಗಳು ಅವು ಊರೊಟ್ಟಿಗಿನವು ಇರಬಹುದು, ಕಳ್ಳುಬಳ್ಳಿಯವು ಇರಬಹುದು. ಸಂಕೀರ್ಣವಾಗಿರುತ್ತವೆ. ಪ್ರೀತಿ, ದ್ವೇಷ ಒಂದರೊಳಗೊಂದು ಹಾಸುಹೊಕ್ಕಾಗಿರುವ ನೈಜ ಸ್ಥಿತಿಯನ್ನು ಕಥೆಯಲ್ಲಿ ನಿರೂಪಿಸಲಾಗಿದೆ. ಕಥೆಗಾರರಿಗೆ ಗ್ರಾಮೀಣ ಜೀವನ ವಿಧಾನ ಲಯವನ್ನು ಗಾಢವಾಗಿ ಅನುಭವಿಸಿ ಬರೆಯಬಲ್ಲವರಾಗಿದ್ದಾರೆ. ಸಹಜ ಬದುಕಿನ ಸಂಸ್ಕೃತಿಯನ್ನು ವಾಸ್ತವ ಮಾರ್ಗದಲ್ಲಿ ನಿರೂಪಿಸಿದ್ದಾರೆ.

**ಕಲ್ಯಾಣಿ:**

ಈ ಕಥೆಯು ಒಂದು ಕುಡುಕ ಕುಟುಂಬದ ಸ್ಥಿತಿಗತಿಯನ್ನು ಕಟ್ಟಿಕೊಡುತ್ತದೆ. ಕುಡುಕ ಗಂಡನನ್ನು ಕಟ್ಟಿಕೊಂಡು ಸಂಸಾರ ಮಾಡುವುದು ಎಷ್ಟು ಕಷ್ಟ ಎಂಬುದು ಈ ಕಥೆಯಲ್ಲಿ ಪ್ರತಿಬಿಂಬಿತವಾಗುತ್ತದೆ. ಕಲ್ಯಾಣಿಯ ಗಂಡ ರಂಗಣ್ಣ. ಅತ್ತೆ ಮಾವರಿಗೆ ರಂಗಣ್ಣನೊಬ್ಬನೇ ಮಗ ಸುಖವಾಗಿರಬಹುದು ಎಂದು ಕೊಂಡಿದ್ದ ಕಲ್ಯಾಣಿಯು ಕಷ್ಟಕ್ಕೆ ಸಿಲುಕಿಕೊಂಡಿದ್ದಾಳೆ. ಕೊನೆಯಲ್ಲಿ ಆಕೆಯು ಸಾಯಬೇಕೆನ್ನುವ ನಿರ್ಧಾರ ಕೈ ಗೊಳ್ಳುತ್ತಾಳೆ. ಆದರೆ ಕಥೆಗಾರರು ಆಕೆಯನ್ನು ಆ ಊರಿನ ಗೌಡನಿಂದ ಜೀವ ಉಳಿಸಿ ಆಶ್ರಮಕ್ಕೆ ಸೇರಿಸುತ್ತಾನೆ. ಕಥೆಯನ್ನು ಕಥೆಗಾರನೇ ನಿರೂಪಿಸಿದ್ದಾನೆ.

ಕರೀಗೌಡರ ವೈಶಿಷ್ಟ್ಯವೆಂದರೆ ಅವರು ಹೆಣ್ಣು ಪಾತ್ರಗಳನ್ನು ಕಂಡಿರಿಸಿರುವ ರೀತಿ ಈ ಕತೆಯಲ್ಲಿ ಹೆಣ್ಣಿನ ತಾಯ್ತನದ ವಿವಿಧ ಮುಖಗಳು ಮೈತುಂಬಿದಂತೆ ಚಿತ್ರಿತವಾಗಿವೆ. ಮಕ್ಕಳ ಬಗ್ಗೆ ಅಲವತ್ತುಕೊಳ್ಳುವ ತಾಯಿ. ತಾನು ಸೇರಿದ ಮನೆಯ ಏಳಿಗೆಯನ್ನು ಬಯಸುವ ತಾಯಿ, ದುಷ್ಟನಾದರೂ ಅವನನ್ನು ಬೈದರೂ, ಮಗನೆಂಬ ಮಮಕಾರ ಕೊರೆಯದ ತಾಯಿ, ಗಂಡ ಆಲಸಿ ಸೋಮಾರಿ, ಕೆಲಸಕ್ಕೆ ಬಾರದನಾದರೂ ಮನೆತನ ಸಾಗಿಸಿಕೊಂಡು ಹೋಗಲು

ಛಲದಿಂದ ದುಡಿಯುವ, ಮನೆಯನ್ನು ಪೊರೆಯುವ ತಾಯಿ ಹೀಗೆ ಹೆಣ್ಣಿನ ತಾಯ್ತನದ ವಿವಿಧ ಮುಖಗಳು ಇಲ್ಲಿನ ಕಥೆಯಲ್ಲಿ ಕಾಣುತ್ತವೆ.

**ಬೆಳಕಾದ ಮೇಲೆ:**

ಈ ಕಥೆಯು ಒಂದು ಸಂಸಾರದಲ್ಲಿರುವ ಅಣ್ಣ ತಮ್ಮಂದಿರ ಭಾವನೆಗಳನ್ನು ಎಳೆ-ಎಳೆಯಾಗಿ ಬಿಚ್ಚಿ ಕೊಡುತ್ತದೆ. ಇಲ್ಲಿ ವ್ಯಕ್ತವಾಗಿರುವ ವಿಷಯ ಕಥೆಗೆ ಮಾತ್ರ ಸೀಮಿತವಲ್ಲ. ಇಂದಿನ ದಿನಗಳಲ್ಲಿ ಒಂದೇ ಮನೆಯಲ್ಲಿ ಒಂದೇ ತಾಯಿಗೆ ಹುಟ್ಟಿದ ಮಕ್ಕಳು ಬೆಳೆಯುತ್ತಾ-ಬೆಳೆಯುತ್ತಾ ದಾಯಾದಿಗಳಾಗುತ್ತಾರೆ. ಇದು ಇಂದಿನ ನಗರ-ಹಳ್ಳಿ ಎರಡು ಕಡೆಯಲ್ಲೂ ಕಂಡು ಬರುತ್ತಿದೆ. ನಿಜ ಸ್ಥಿತಿಯಲ್ಲಿ ಬೇರೆ-ಬೇರೆ ಅಥವಾ ದಾಯಾದಿಯಾದರೂ ಭಾವನಾತ್ಮಕವಾಗಿ ಒಂದಾಗುತ್ತಾರೆ ಎಂಬುದು ಮತ್ತೊಂದು ವಿಷಯ. ಈ ಕಥೆಯ ಪಾತ್ರಗಳ ಹೆಸರುಗಳು ಗೌಣವಾಗಿವೆ. ತಂದೆ-ತಾಯಿ, ಅಣ್ಣ-ಅತ್ತಿಗೆ, ಅಣ್ಣನ ಮಗ, ಅಣ್ಣನ ಸೊಸೆ ಮತ್ತು ತಮ್ಮ ಇವರೆಲ್ಲರು ಇರುವ ಒಂದು ಕುಡುಂಬ. ಇದರಲ್ಲಿ ನಿರೂಪಕನ ಪಾತ್ರವನ್ನು ಕಥೆಗಾರ ತಮ್ಮನನ್ನು ಆಯ್ಕೆ ಮಾಡಿಕೊಂಡಿದ್ದಾರೆ. ತಮ್ಮನ ಹೆಂಡತಿ ಒಂದು ತಿಂಗಳ ಹಸುಗೂಸನ್ನು ಬಿಟ್ಟು ಬೇರೆಯವರ ಜೊತೆ ಓಡಿಹೋಗುತ್ತಾಳೆ ಇದೇ ಕೊರಗಿನಲ್ಲಿ 'ತಮ್ಮ' ಹಾಸಿಗೆ ಹಿಡಿಯುತ್ತಾನೆ. ಈತನನ್ನು ಕುರಿತು ಮನೆಯಲ್ಲಾಡುವ ಮಾತುಗಳು ಇವನನ್ನು ಸಾವಿನಂಚಿಗೆ ಕೊಂಡೊಯ್ಯುತ್ತದೆ.

> "ಪಾಪಿ! ಎಲ್ಲದರೂ ದೇಶಾಂತರ ಹೋಗಿ ನೀರು ನೆಲೆ ಇಲ್ಲದ ಕಡೆ ಸಾಯದೆ ಇಲ್ಲಿ ಬಂದು ನಮಗೆ ಯಾಕೆ ಕಾಡಿಸ್ತಾನೋ ಪೀಡೆ!" ಎನ್ನುತ್ತಾ ಆಕೆ "ಹಾಗಾದರೆ ಮತ್ತೆ ನಾವು ಅವನ ಸಾವಿಗೋಸ್ಕರ ಸಾಲಗಾರರಾಗಬೇಕೆ?*

ಮಾನಸಿಕವಾಗಿ ಬಳಲುತ್ತಿರುವಂತವರಿಗೆ ಈ ರೀತಿಯ ಮಾತುಗಳನ್ನಾಡಿ ಮನಸ್ಸನ್ನು ನೋಯಿಸಿದರೆ ಯಾರುತಾನೆ ಸಾಯದೆ ಇರುತ್ತಾರೆ. ಬೀಚನಹಳ್ಳಿ ಅವರು ಕೊನೆಯಲ್ಲಿ ಸಾವನ್ನು ತಂದಿಟ್ಟು ಸಮಾಜಕ್ಕೆ ಮಾನಸಿಕ ವೇದನೆಯ ಪರಿಣಾಮವನ್ನು ತಿಳಿಸಿದ್ದಾರೆ.

**ಒಂದು ಬೆಳದಿಂಗಳ ರಾತ್ರಿ:**

ಬೀಚನಹಳ್ಳಿ ಅವರು ವ್ಯವಹಾರಿಕರಲ್ಲಿ, ವೃತ್ತಿ ಮಾಡುವವರಲ್ಲಿ ಎಂತಹ ಭಾವನಾತ್ಮಕ ಸಂಬಂಧವಿರುತ್ತದೆ ಎಂಬುದನ್ನು ಈ ಕಥೆಯ ಮೂಲಕ ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ. ಈ ಕಥೆಯು ಒಂದು ದಿನ ರಾತ್ರಿ ನಡೆದ ದುಃಖದ ಸಂಗತಿಯನ್ನು ತಿಳಿಸುವಲ್ಲಿ ಯಶಸ್ವಿಯಾಗಿದೆ. ದೋಣಿ ನಡೆಸುವವನು ಅಂಬಿಗ ಈತನು ದಿನಾಲು ವ್ಯವಹಾರಿಕರನ್ನು ಮಾಸ್ತರುಗಳನ್ನು ಕ್ಲರ್ಕಗಳನ್ನು ಸರಿಯಾದ ಟೈಂಗೆ ಕರೆದುಕೊಂಡು ಹೋಗುವುದು ಮತ್ತೆ ಕರೆದುಕೊಂಡು ಬರುವುದು ಅವನ ಕೆಲಸವಾಗಿತ್ತು. ರಶೀದ್ ಇವನೊಬ್ಬ ವರ್ತಕ ಅಂಬಿಗನ ಆಪ್ತ ಸ್ನೇಹಿತ. ಈತನನ್ನು ಯಾರೋ ದುಷ್ಕರ್ಮಿಗಳು ಕೊಲೆಮಾಡಿದ್ದರು. ಇದು ತನ್ನ ಮಗ ರಾಜುವಿನಿಂದ ಗೊತ್ತಾಗುತ್ತದೆ. ಇದನ್ನು ಭೀಮಣ್ಣನೇ ಮಾಡಿಸಿರಬಹುದು ಎಂಬುದು ರಶೀದನ

ಹೆಂಡತಿಯ ವಾದ. ಏಕೆಂದರೆ ಈಗಾಗಲೇ ಭೀಮಣ್ಣ ಕೆಲವರನ್ನು ಸಾವಿಗೀಡು ಮಾಡಿದಂತ ವ್ಯಕ್ತಿಯಾಗಿದ್ದನು. ಕೊನೆಯಲ್ಲಿ ರಶೀದ ಕೋಲೆಯಾಗಿರುತ್ತಾನೆ, ತನ್ನ ಹೆಂಡತಿಯು ರೋಧಿಸುತ್ತಾಳೆ, ಉಳಿದವರು ಹೆಣವನ್ನು ವಿಧವಿಧವಾಗಿ ಕೊಂದಿದ್ದಾರೆ ಎಂದು ತಾವು ಸಹ ಸಂಕಟ ವ್ಯಕ್ತ ಪಡಿಸುತ್ತಾರೆ.

ಕಥೆಯನ್ನು ಕಥೆಗಾರರೂ ನಿರೂಪಣೆ ಮಾಡಿದ್ದಾರೆ. ಕಥೆಯನ್ನು ಸಂಭಾಷಣೆಯ ಮೂಲಕವಾಗಿ ಎಲ್ಲಾ ಪಾತ್ರಗಳನ್ನು ಎಚ್ಚರಿಸಿಕೊಂಡು ಕಥೆ ಹೇಳುತ್ತಾರೆ. ಈ ಕಥೆಯು 'ಬೆಳಕಾದ ಮೇಲೆ' ಕಥೆಯ ಕೊನೆಯಲ್ಲಿ ಹೀಗೆ ನಡೆಯುತ್ತದೆಯೇ ಅದೇ ರೀತಿಯಲ್ಲಿ ಕೊನೆಗೋಳ್ಳುತ್ತದೆ. ರಶೀದ್ ಹಾಗೂ ಅಂಬಿಗನ ನಡೆವೆ ಇದ್ದಂತಹ ಭಾವನಾತ್ಮಕ ಸಂಬಂಧ ಎಂತಹ ಘಾಡವಾದದು ಎಂಬುದನ್ನು ಇಲ್ಲಿ ಗುರುತಿಸಬಹುದಾಗಿದೆ.

**ವಿಯೋಗ:**

ಈ ಕಥೆಯಲ್ಲಿ ಮರ ಕಡಿಸಿದ ಮಗನ ನಿಲುವನ್ನು ಅಸಹಾಯಕ ಸ್ಥಿತಿಯಲ್ಲಿ ನೋವನ್ನು ಅನುಭವಿಸಿದ ತಾಯಿ ನೆಲಕ್ಕುರುಳಿದ ಮರಗಳು ಮರುಳಿ ಜೀವ ಪಡೆಯುವುದಿಲ್ಲ ಎಂಬ ಸತ್ಯದ ಅರಿವಾಗಿ ಪುನಃ ನೆಡಲು ನಿಲ್ಲುತ್ತಾಳೆ. ಹಳ್ಳಿಯ ಜೀವವೊಂದು ಮರನೆಡುವ ನಿರ್ದಾರ ಚೂರು ಭಾರವಾದ ನಿರ್ಧಾರವೇ ಆದರೂ ಕಥೆಗಾರರ ಪರಿಸರ ಕಾಳಜಿಯನ್ನು ಎತ್ತಿ ತೋರಿಸುತ್ತದೆ. ಎಂದು ಹೇಳಬಹುದು.

ಕರೀಗೌಡರ ಈ ಕಥೆಯಲ್ಲಿ ಇನ್ನೊಂದು ವೈಶಿಷ್ಟ್ಯವೆಂದರೆ ಅವರು ಹೆಣ್ಣು ಪಾತ್ರವನ್ನು ಕಂಡಿರಿಸಿರುವ ರೀತಿ. ಈ ಕತೆಯಲ್ಲಿ ಹೆಣ್ಣಿನ ತಾಯ್ತನದ ವಿವಿಧ ಮೂಖಗಳು ಮೈ ತುಂಬಿದಂತೆ ಚಿತ್ರಿತವಾಗಿವೆ. ಹೆಣ್ಣಿನ ಇತರ ಮುಖಗಳ ಬಗ್ಗೆ ಕಥೆಗಾರರಿಗೆ ಅಷ್ಟು ಆಸಕ್ತಿ ಇದ್ದಂತಿಲ್ಲ. ಕನ್ನಡ ನವ್ಯ ಕಥೆಗಾರರ ಪ್ರಮುಖ ಆಸಕ್ತಿಯಾದ ಗಂಡು-ಹೆಣ್ಣುಗಳ ಕಾಮ ಇಲ್ಲಿನ ಕತೆಗಳಲ್ಲಿ ಮುಖ್ಯವಾಗುವುದೇ ಇಲ್ಲ. ಮಕ್ಕಳ ಬಗ್ಗೆ ಅಲವತ್ತುಕೊಳ್ಳುವ ತಾಯು, ತಾನು ಸೇರಿದ ಮನೆಯ ಏಳಿಗೆಯನ್ನು ಬಯಸುವ ತಾಯಿ, ದುಷ್ಟನಾದರೂ, ಅವನನ್ನು ಬೈದರೂ, ಮಗನೆಂಬ ಮಮಕಾರ ತೊರೆಯದ ತಾಯಿ, ಮನೆಯನ್ನು ಪೊರೆಯುವ ತಾಯಿ ಹೀಗೆ ಹೆಣ್ಣಿನ ತಾಯ್ತನದ ವಿವಿಧ ಮುಖಗಳು ಇಲ್ಲಿನ ಕತೆಗಳಲ್ಲಿ ಕಾಣುತ್ತವೆ. ಈ ಕಥೆಯಲ್ಲಿ ತಾನು ಬೆಳೆಸಿದ ಮರಗಳನ್ನು ಮಾರಾಟ ಮಾಡಿದ ಮಗನ ದುಷ್ಟತನದಿಂದಾಗಿ ಕಾಯಿಲೆ ಬೀಳುವ ತಾಯಿ ಮತ್ತೆ ಹೊಸದಾದ ಮರಗಳನ್ನು ನೆಡಲು ಆತ್ಮ ಶಕ್ತಿಯಿದೆಂಬಂತೆ ಚೇತರಿಸಿಕೊಳ್ಳುವ ಪರಿ ತುಂಬ ಉಜ್ವಲವಾಗಿದೆ. ಈ ಕತೆ ನಿಸರ್ಗ, ಮನುಷ್ಯ ವಾಣಿಜ್ಯದ ಆಸಕ್ತಿ, ಹೆಣ್ಣಿನ ತಾಯ್ತನ ಮತ್ತು ನಿಸರ್ಗದ ಹೆಣ್ತನ ಇವೆಲ್ಲವನ್ನು ಸಹಜವೆಂಬಂತೆ ಒಂದರೊಳಗೊಂದು ಹೆಣೆದು ಚೆನ್ನಾಗಿ ರೂಪುಗೊಂಡಿದೆ.

ಕಥೆಯು ನಿರೂಪಗೊಂಡ ಬಗ್ಗೆಯು ಒಂದು ವಿಶೇಷವಾಗಿದೆ. ಕಥೆಯಲ್ಲಿ ಬರುವ ಪಾತ್ರಗಳ ಜೋತೆಯಲ್ಲಯೇ ಕತೆಯ ನಿರೂಪಣೆಯಾಗಿದೆ. ಹೆಚ್ಚಾಗಿ ಚಂದ್ರಪ್ಪ ತಮ್ಮನಿಂದಲೇ ಆಗಿದೇ ಈ ಕತೆಯನ್ನು ಓದುತ್ತಾ ಹೋದಂತೆಲ್ಲಾ 'ಅಪ್ಪಿಕೊ-ಚಿಪ್ಕೊ' ಚಳುವಳಿ ಜ್ಞಾಪಕಕ್ಕೆ

ಬರುತ್ತದೆ ಏಕೆಂದರೆ ಚಂದ್ರಪ್ಪನ ತಾಯಿ ತಾನು ಬೆಳೆಸಿದಂತಹ ಮರಗಳನ್ನು ಕಡೆಯುವಂತಹ ಸಂದರ್ಭದಲ್ಲಿ ಈ ರೀತಿ ಅಲುಬಿದ್ದಾಳೆ.

"ನಾನು ನೆಟ್ಟು ನೀರು ಹೂದು ಸಾಕಿ ಬೆಳೆಸಿದ ಮರಗಳ ನನ್ನ ಕಣ್ಮುಂದೆ ಕಡಿಯಕ್ಕೆ ನಾನು ಬಿಡುವುದಿಲ್ಲ. ನೀವು ಕಡಿಯೋದಾದ್ರೆ ಮೊದ್ಲು ನನ್ನ ಕಡಿದು ಆಮೇಲೆ ನನ್ನ ಮರಗಳನ್ನು ಕಡಿದುಕೊಂಡು ಹೋಗಿ"*

ಮೇಲಿನ ಮಾತು ನಿಜವಾಗಿ ಯಾರಿಗೆ ಪರಿಸರದ ಕಾಳಜಿ ಇರುತ್ತದೆಯೇ ಅಂತವರ ಬಾಯಿಯಲ್ಲಿ ಬರಲು ಸಾದ್ಯ. ಕಥೆಯ ರಚನೆಗೆ ಕಥಾ ತಂತ್ರವನ್ನು ಪ್ರಯೋಗಮಾಡಿಕೊಂಡಿಲ್ಲ. ಇಲ್ಲಿ ನಿಜವಾಗಲೂ ಚಂದ್ರಣ್ಣನ ತಾಯಿಗೆ ಪರಿಸರದ ಕಾಳಜಿ ಇತ್ತೋ ಅಥವಾ ಕಥೆಗಾರನಿಗೆ ಕಾಳಜಿ ಇತ್ತೋ ಎಂಬುದು ಪ್ರಶ್ನೆಯಾಗಿದೆ. ಈಗ ನಾಶವಾಗುತ್ತಿರುವ ಅರಣ್ಯದ ಶೇಖಡ ತಿಳಿದು ಕೊಂಡರೆ ನಿಜವಾಗಲೂ ಕಥೆಗಾರನಿಗೆ ಪರಿಸರದ ಕಾಳಜಿ ಇರುವುದರಿಂದ ಇಂತಹ ಕಥೆಯನ್ನು ಬರೆಯಲು ಸಾಧ್ಯವಾಗುತ್ತದೆ. ಕಥೆಗಾರರು ಸೃಷ್ಟಿಸಿಕೊಂಡಿರುವಂತಹ ಚಂದ್ರಪ್ಪನ ತಾಯಿಯನ್ನು ನೆನಪಿಸಿಕೊಂಡರೆ "ಸಾಲು ಮರದ ತಿಮ್ಮಕ್ಕ" ಜ್ಞಾಪಕಕ್ಕೆ ಬರುತ್ತಾಳೆ. ಇಂತಹ ಅಭಿಪ್ರಾಯಗಳನ್ನು ಪ್ರತಿಬಿಂಬಿಸುವಂತಹ ಇನ್ನಷ್ಟು ಕಥೆಗಳನ್ನು ರಚಿಸಬೇಕು ಎಂಬುದು ನನ್ನ ಕೋರಿಕೆ.

**ದುಃಖಿಗಳು:**

ಈ ಕಥೆಯ ಶೀರ್ಷಿಕೆ ಹೇಳುವಂತೆ ಕಷ್ಟದಿಂದ ಕೂಡಿದ ಒಂದು ಸಂಸಾರದ ಚಿತ್ರಣವನ್ನು ಕಟ್ಟಿಕೊಡುತ್ತದೆ. ಸಹಜವಾಗಿ ಪ್ರತಿಯೊಬ್ಬರಿಗೂ ಜೀವನದಲ್ಲಿ ಕಷ್ಟ ಬಂದಿರುತ್ತದೆ. ಆದರೆ 'ದುಃಖಿಗಳು' ಕಥೆಯಲ್ಲಿ ಕಂಡು ಬರುವ ಕಷ್ಟ ಸ್ವಲ್ಪ ವಿಶಿಷ್ಟವಾಗಿ ಕಂಡಿದೆ. 'ರಾಮಯ್ಯ' ಕುಟುಂಬದ ಯಜಮಾನ ಈತನಿಗೆ ಮೂವ್ವರು ಮಕ್ಕಳು, ಎರಡು ಗಂಡು ಒಂದು ಹೆಣ್ಣು. ಇದರಲ್ಲಿ ಒಬ್ಬನನ್ನು ಹಾಲೂರಿನ 'ಸಿದ್ದಪ್ಪ'ನ ಮನೆಯಲ್ಲಿ ಜೀತಕ್ಕಿಟ್ಟಿದ್ದನು. ಇನ್ನೋಬ್ಬ 'ರಾಜ' ತುಂಬಾ ಬುದ್ದಿವಂತ. ಎಸ್.ಎಸ್.ಎಲ್.ಸಿ. ಮೊದಲ ವರ್ಷದಲ್ಲಿ ಪಾಸುಮಾಡಿ ಮತ್ತೆ ಮೆಟ್ರಿಕ್ ಓದಬೇಕೆಂದುಕೊಂಡವನು. ರಾಜುಗೆ ಮೆಡಿಕಲ್ ಸೀಟು ಸಿಕ್ಕಿದೆ ಕೊನೆಯ ವರ್ಷದಲ್ಲಿ ಕಲಿಯುತ್ತಿದ್ದಾನೆ. ಈತನಿಗೆ ಹಣದ ಅವಶ್ಯಕತೆ ಇರುವುದರಿಂದ ಎರಡುಸಾವಿರ ಕಳಿಸು ಎಂದು ತಂದೆ 'ರಾಮಯ್ಯ'ನಿಗೆ ಕಾಗದ ಬರೆದಿರುತ್ತಾನೆ. ಈ ಕಾಗದವನ್ನು ಓದುವುದರ ಮೂಲಕ ಕಥೆ ಪ್ರಾರಂಭವಾಗುತ್ತದೆ. ಮಗಳು ಈಕೆಯು ಮನೆಕೆಲಸ ನೋಡಿಕೊಂಡು ಜೊತೆಗೆ ಒಂದು ಹಸುವನ್ನು ಮೆಯಿಸುವ ಕೆಲಸ ಈಕೆಯದು. 'ಬಸಪ್ಪ' ಹಾಲೂರಿನ ಸಾಹುಕಾರ. ಈತನು ಈ ಹಿಂದೆ ರಾಮಯ್ಯನಿಗೆ ಊಟಕ್ಕೆ ಕಾಳು ಕರ್ಚಿಗೆ ಹಣ ನೀಡಿದ್ದನು. ಅದನ್ನೆಲ್ಲಾ ಬಡ್ಡಿಸಮೇತ ಹಿಂತಿರುಗಿಸಿದನು ರಾಮಯ್ಯ.

ಈ ಕಥೆಯನ್ನು ಕಥೆಗಾರರು ನಿರೂಪಣೆ ಮಾಡಿದ್ದಾರೆ ಎಂದೆನೆಸುತ್ತದೆ. ಕಥೆಯಿಂದ ಬಡತನ, ಶಿಕ್ಷಣ, ಅಧಿಕಾರದ ಪ್ರಭುತ್ವ ಹಣದ ತೊಂದರೆಗಳು, ಕೊಟ್ಟುಕಸಿದುಕೊಳ್ಳುವ ಪ್ರವೃತ್ತಿ, ಆಸೆ ನಿರಾಸೆಯಾಗುವುದು ಮುಂತಾದ ಅಂಶಗಳು ಕಂಡು ಬರುತ್ತವೆ. ಇಂದಿನ

ಕಾಲದಲ್ಲಿ ಬಡತನದಲ್ಲಿ ಓದುತ್ತಿರುವ ಮಕ್ಕಳು ತುಂಬಾ ಚೆನ್ನಾಗಿ ಓದುತ್ತಾರೆ. ಇಲ್ಲಿ ಕಥೆಗಾರರು ಗ್ರಾಮೀಣ ಜನತೆಯು ಸಹ ಡಾಕ್ಟರ್ ಆಗಲು, ಅದನ್ನು ಓದಲು ಅರ್ಹರಾಗಿರುತ್ತಾರೆ, ಹಾಗೂ ಎಂತಹ ಕಷ್ಟದ ವಿಷಯ ಕೊಟ್ಟರು ಅದನ್ನು ಅರಗಿಸಿಕೊಳ್ಳುವ ಸಾಮರ್ಥ್ಯ ಹೊಂದಿರುತ್ತಾರೆ ಎಂಬುದನ್ನು ಈ ಕಥೆಯ ಮೂಲಕ ಸಾಬೀತು ಪಡಿಸಿದ್ದಾರೆ. ರೈತನಾದವನು ತಾನು ಎಷ್ಟೇ ಕಷ್ಟವಿದ್ದರು ನನ್ನ ಮಕ್ಕಳು ಓದಿ ವಿದ್ಯಾವಂತರಾಗಬೇಕು ಎಂಬ ಮಹಾಯಾಸೆ ಇಟ್ಟುಕೊಂಡಿರುತ್ತಾರೆ. ಕಥೆಯಲ್ಲಿ ಬೀಚನಹಳ್ಳಿ ಅವರು ರಾಮಯ್ಯನಂತ ಪಾತ್ರವನ್ನು ಸೃಷ್ಟಿಸಿ ಆತನಿಂದ ಇಂದಿನ ಜನತೆ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಲು ಎಂತಹ ಕಷ್ಟಬೀಳುತ್ತಾರೆ ಎಂಬುದನ್ನು ಅತ್ಯಂತ ಸರಳವಾದ ಭಾಷಾಶೈಲಿಯಲ್ಲಿ ತಿಳಿ ಹೇಳಿದ್ದಾರೆ. ರಾಮಯ್ಯ ಕೊನೆಯಲ್ಲಿ ಮೊಟು ಬೀಡಿಯನ್ನಿಚ್ಚಿಕೊಂಡು ಸೂರ್ಯ ಹುಟ್ಟುವುದನ್ನು ನೋಡುತ್ತಾ ಕೂರುತ್ತಾನೆ ಅಂದರೆ ರಾಮಯ್ಯ ದೃತಿಗಡದೆ ದೈರ್ಯದಿಂದ ಗದ್ದೆ ಊಳುಬಹುದು ಎಂದು ಕೊಂಡಿರುತ್ತಾನೆ.

**ನೆನಪಲ್ಲ ವಾಸ್ತವ:**

ಒಂದು ಹಳ್ಳಿಯ ಶಾಲೆಯನ್ನು ಕೇಂದ್ರವಾಗಿಟ್ಟುಕೊಂಡು ಈ ಶತಮಾನದ ಐದನೆಯ ದಶಕದ ಗ್ರಾಮೀಣ ಬದುಕಿನ ವಿವಿಧ ಮುಖಗಳನ್ನು ಪರಿಶೀಲಿಸುವ ಆಕಾಂಕ್ಷೆಯನ್ನು ವ್ಯಕ್ತಪಡಿಸುತ್ತದೆ. ತಗ್ಗಳ್ಳಿಯಲ್ಲಿ ಇಂದು ಶಾಲೆಯನ್ನು ತೆರೆಯಬೇಕೆಂದುಕೊಂಡವರು 'ಕಾಡಣ್ಣ', 'ಓದ್ರೋ ಬೊರೆಗೌಡ', 'ನಿಂಗಣ್ಣ', 'ಮರೇಗೌಡ', 'ಹೊನ್ನಯ್ಯ' ಸುಗ್ಗಯ್ಯ, ತಿಮ್ಮಾದೇವಿ. ಊರಲ್ಲಿ ಶಾಲೆ ಬೇಡ ಎನ್ನುವವರು ಗುಂಡಯ್ಯ, ಸಣ್ಣಪ್ಪ, ತಿಮ್ಮಪ್ಪ, ಲಿಂಗಯ್ಯ, ಭೈರೇಗೌಡ, ಕರಡೀಗೌಡ ಕೆಲವು ಊರಿನ ಗ್ರಾಮಸ್ಥರು. ಈ ಎರಡು ಗುಂಪುಗಳ ನಡುವೆ ಶಾಲೆಯನ್ನು ತೆರೆಯುವುದಕ್ಕೊಸ್ಕರ ಜಗಳವಾಗುತ್ತದೆ. ಇದರಲ್ಲಿ ಶಾಲೆ ಬೇಕು ಎಂಬುವವರು ಶಾಲೆಯನ್ನು ಪ್ರಾರಂಭಿಸಿದರು. ಕೆಲವು ದಿನಗಳ ನಂತರ ಶಾಲೆಯು ನಿಂತು ಹೋಗುವ ಸಂದರ್ಭ ಬಂದಿತು. ಏಕೆಂದರೆ ಶಾಲೆಯನ್ನು 'ದೊಡ್ಡಪ್ಪನ' ಜಗುಲಿಯ ಮೇಲೆ ಪ್ರಾರಂಭಿಸಿ ನಂತರ ಊರ ಹೊರಗಡೆ ಒಂದು ಗುಡಿಸಲಿನಲ್ಲಿ ನಡೆಸುತ್ತಿದ್ದರು. ಶಾಲೆ ಪ್ರಾರಂಭವಾಗಿ ಎರಡು ವರ್ಷವಾದರೂ ಶಾಲೆ ಕಟ್ಟಿಸಲಾಗಲಿಲ್ಲ. ಆ ಶಾಲೆಯ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದ ಬೋರೇಗೌಡ ಮರಣವಪ್ಪಿದ ನಂತರ ಆ ಗುಡಿಸಲನ್ನು ಊರಿನ ಜನತೆ ಬೇರೆ–ಬೇರೆ ಕೆಲಸಗಳಿಗೆ ಉಪಯೋಗಿಸಿಕೊಂಡರು.

ಕಥೆಯ ಶೀರ್ಷಿಕೆಯೇ ಹೇಳುವಂತೆ ಇದೊಂದು ಕಥೆಯಲ್ಲ ವಾಸ್ತವವಾಗಿ ನಡೆದ ನಿಜ ಸಂಗತಿಯನ್ನು ಕಟ್ಟಿಕೊಡುತ್ತದೆ. ಇದು ನಿಜ ಸಂಗತಿಯನ್ನು ಪ್ರತಿಬಿಂಬಿಸುತ್ತಿದ್ದರೂ ಸಹ ಈ ಕಥೆಯಲ್ಲಿ ನಡೆಯುವ ವಾಗ್ವಾದಗಳು ಬೇರೆ–ಬೇರೆ ದೃಷ್ಟಿಯತ್ತ ತೆಗೆದುಕೊಂಡು ಹೋಗುತ್ತದೆ. ಕಥೆಯ ನಿರೂಪಣಾ ವಿಧಾನವು ಕಥೆಗಾರನಿದಂಲೇ ಸಾಗಿದೆ. ಇಂದಿನ ಸಮಾಜದಲ್ಲಿ ವಿದ್ಯೆ ಕಲಿಯದಿದ್ದರೆ ಕಣ್ಣಿದ್ದು ಕುರುಡನಂತೆ ಇರಬೇಕಾಗುತ್ತದೆ. ವಿದ್ಯೆ ಕಲಿಯುವುದು ಪ್ರತಿಯೊಬ್ಬರ ಕರ್ತವ್ಯವಾಗಬೇಕು. ತಗ್ಗಳಿಯಲ್ಲಿ ಪ್ರಾರಂಭವಾದ ಶಾಲೆ ಅಲ್ಲಿನ ಮಕ್ಕಳಿಗೆ ಕಣ್ಣು ತೆರೆಸಿದಂತೆ ಆಗಿದೆ. ಶಾಲೆ ನಡೆಸಲು ಬಿದ್ದ ಕಷ್ಟ ಅತ್ಯಂತ ನಿಷ್ಠೂರವಾದದ್ದು. ಆದರೂ ಕೊನೆಗೆ ಕಾಡಣ್ಣ

ತಮ್ಮ ಮನೆಯಲ್ಲಿಯೇ ಶಾಲೆ ಪ್ರಾರಂಭಿಸಿದ ಕಥೆಗೆ ಶಕ್ತಿ ತಂದು ಕೊಟ್ಟಿದೆ. ಇಂದಿಗೂ ಸಹ ಬೋರೇಗೌಡನಂತವರು, ಕಾಡಣ್ಣನಂತವರು ಹಳ್ಳಿ ಪ್ರದೇಶದಲ್ಲಿದ್ದಾರೆ ಎಂಬುದನ್ನು ಬೀಚನಹಳ್ಳಿಯವರು ಈ ಕಥೆಯ ಮೂಲಕ ಪರಿಚಯ ಮಾಡಿ ಕೊಟ್ಟಿದ್ದಾರೆ.

ಬೀಚನಹಳ್ಳಿ ಅವರಿಗೆ ಶಿಕ್ಷಣದ ಬಗ್ಗೆ ಇರುವ ಕಾಳಜಿ, ಹಳ್ಳಿ ಪ್ರದೇಶಗಳಲ್ಲಿ ನಡೆಯುವ ಶಾಲೆಗಳ ಸಮಸ್ಯೆಗಳು, ಹಳ್ಳಿ ವಿದ್ಯಾರ್ಥಿ, ವಿದ್ಯಾರ್ಥಿನೀಯರ ಸಮಸ್ಯೆಗಳನ್ನು ಅರ್ಥ ಮಾಡಿಕೊಂಡಿರುವ ಅವರ ಮನೋಭಾವ ತುಂಬಾ ವಿಶೇಷವಾದದ್ದು. ಆದರೆ ಈ ಕಥೆಯಲ್ಲಿ ಪ್ರೀತಿ–ಪ್ರೇಮ ಜಗಳನ್ನು ತಂದಿದ್ದಾರೆ. ಎಂಬುದು ನನಗೆ ತಿಳಿಯದ ವಿಷತ. ಆದರೂ ಸಹ ಇಂತಹ ಜಗಳು ಕೆಲವೊಂದು ಬಾರಿ ಸುಮಾರ್ಗಕ್ಕೆ ಒಳ್ಳೆಯ ದಾರಿಯನ್ನೊದಗಿಸಿ ಕೊಡಬಹುದು ಎಂಬುದು ಬೀಚನಹಳ್ಳಿಯವರ ಅಭಿಪ್ರಾಯವಾಗಿದೆ.

**ಸಹಜ:**

ಈ ಕಥೆಯು ಒಬ್ಬ ಸ್ವತಂತ್ರ್ಯ ಹೋರಾಟಗಾರನ ಮಾಶಾಸನ ಕುರಿತು ಹೇಳುತ್ತದೆ. ಸ್ವಾತಂತ್ರ್ಯ ಬಂದ ನಂತರದ ವರ್ಷಗಳಲ್ಲಿ ಸ್ವಾತಂತ್ರ್ಯಕ್ಕೆ ಹೋರಾಡಿದವರಿಗೆ ತಿಂಗಳಿಗೆ ಇಷ್ಟು ಮಾಶಾಸನ ನೀಡುವುದನ್ನು ಸರ್ಕಾರ ಜಾರಿಗೆ ತಂದಿತು. ಪ್ರಮುಖವಾಗಿ ಈ ಕಥೆಯಲ್ಲಿ ಗುರುತಿಸುವ ಅಂಶಗಳೆಂದರೆ ಹೋರಾಟಗಾರರಿಗೆ ಮಾಶಾಸನ ನೀಡುತ್ತಾರೆ ಎಂಬುದು ಒಂದಾದರೆ, ಎರಡನೆಯದು ಸರ್ಕಾರದ ತಿರಸ್ಕಾರ ಭಾವನೆ, ಮತ್ತೊಂದು ಸರ್ಕಾರದ ವಿರುದ್ಧ ಸ್ವಾತಂತ್ರ್ಯ ಹೋರಾಟಗಾರನಿಂದ ದಿಕ್ಕಾರ, ಪ್ರತಿಭಟನೆ ಮಾಡುವುದು ಮುಖ್ಯ ಅಂಶಗಳನ್ನು ಗುರುತಿಸಬಹುದು. ಸರ್ಕಾರವು ಸ್ವತಂತ್ರ್ಯ ಹೋರಾಟಗಾರರಿಗೆ ಮಾಶಾಸನ ನೀಡುವುದೇನು ನಿಜ. ಆದರೆ ಅದನ್ನು ಯಾವ ರೀತಿಯಲ್ಲಿ ಕೊಡುತ್ತಾರೆ ಅವರನ್ನು ಯಾವ ರೀತಿ ಟ್ರೀಟ್ ಮಾಡುತ್ತಾರೆ ಅವರನ್ನು ಯಾವಾಗ ಉಪಯೋಗಿಸಿಕೊಳ್ಳುತ್ತಾರೆ ಎಂಬುದನ್ನು ಕಥೆಯಲ್ಲಿ ನೋಡಬಹುದು. ಹಾಗೆಯೇ ಇಂತಹವರ ಬಗ್ಗೆ ತಿರಸ್ಕಾರದ ಭಾವನೆ ಉಂಟಾಗಿದೆ. ಅವರನ್ನು ನೋಡುವ ದೃಷ್ಟಿಕೋನಗಳು ಬದಲಾಗಿವೆ ಎಂಬುದನ್ನು ಗುರುತಿಸಲಾಗಿದೆ. ಮಾಶಾಸನ ಪಡೆಯುವ ವ್ಯಕ್ತಿ ಒಬ್ಬ ಜವಾನನಿಂದ ಸತ್ಯತಿಳಿದ ಮೇಲೆ ಈ ರೀತಿ ಪ್ರತಿಭಟನೆ ದಿಕ್ಕಾರ ಆಕುತ್ತಾನೆ.

"ಮುಖ್ಯ ಮಂತ್ರಿಗಳಿಗೆ ಧಿಕ್ಕಾರ, ದಾನಣ್ಣನಿಗೆ ಧಿಕ್ಕಾರ, ಮೀಟಿಂಗಗಳಿಗೆ ಧಿಕ್ಕರ, ಅಧಿಕಾರಿಗಳಿಗೆ ಧಿಕ್ಕರ, ಕೋರ್ಟಗೆ ಧಿಕ್ಕಾರ, ನಿಮ್ಮ ಮಾಶಾಸನಕ್ಕೆ ಧಕ್ಕಾರ ಎಂದು ಕಿರುಚುತ್ತಾನೆ"ಸ್ವಾತಂತ್ರ್ಯ ಹೋರಾಟಗಾರ ಸರ್ಕಾರದ ನಿಯಮಗಳನ್ನು ಖಂಡಿಸುತ್ತಾ ಈ ರೀತಿಯಾಗಿ ಧಿಕ್ಕಾರ ಎಸಗುತ್ತಾನೆ ಇಂದಿನ ದಿನಗಳಲ್ಲಿಯು ಸಹ ಇಂತಹ ಪರಿಸ್ಥಿತಿಗಳು ಬಂದು ಒದಗಿವೆ ಎಂದರೆ ತಪ್ಪಾಗಲಾರದು.

**ಕಡಲಮಂತು:**

ಎರಡು ಮನೆತನಗಳ ನಡುವಿನ ಸಂಘರ್ಷವನ್ನು ಕುರಿತ ಕಥೆಯಾಗಿದೆ. ಮುನಿಯನದು ಒಂದು ಸಂಸಾರ, ಇದರಲ್ಲಿ ಮಗಳು ತಿಮ್ಮಿ ಮಗ ಮುದ್ದ ಮೂವ್ವರಿದ್ದರು. ಕೆಂಚಯ್ಯನ

ಮತ್ತೊಂದು ಸಂಸಾರ, ಕೆಂಚಯ್ಯ ನಿಂಗಿ ಎಂಬವವಳನ್ನು ವಿವಾಹವಾಗಿದ್ದನು. ಕೃಷ್ಣ ಎಂಬ ಒಂದು ಗಂಡು ಮಗ ಸಹ ಇತ್ತು ಈತನಿಗೆ ಸ್ವಲ್ಪ ವಯಸ್ಸು ಕೂಡ ಆಗಿತ್ತು. ತಿಮ್ಮಿಯನ್ನು ಕೆಂಚಯ್ಯ ವಿವಾಹವಾದನು. ಇಬ್ಬರ ಹೆಂಡತಿಯರ ನಡುವೆ ಜಗಳ ಆಗಿ ಪಂಚಾಯ್ತಿಗೆ ಕೊರುತ್ತಾರೆ. ಇಲ್ಲಿ ಊರಿನ ಯಜಮಾನರು 'ಒಡೆದ ಮಡಿಕೆಗಳ ಮತ್ತೆ ಒಂದು ಗೂಡಿಸಲಾಗುವುದಿಲ್ಲ'* ಎಂದೇಳಿ ಕೆಂಚಯ್ಯನಿಗಿದ್ದ ಆಸ್ತಿಯನ್ನು ಎರಡು ಭಾಗ ಮಾಡಿದರು.

ಕಥೆಯು ಇಬ್ಬರು ಹೆಂಡತಿಯರನ್ನು ಕಟ್ಟಿಕೊಂಡು ಗಂಡನು ಎಂತಹ ನೋವನ್ನು ಅನುಭವಿಸುತ್ತಾರೆ ಎಂಬುದನ್ನು ಗುರುತಿಸಬಹುದು. ಸಾಮಾಜಿಕ ಸಂಘರ್ಷ ನೈತಿಕ ಹೊಣೆಗಾರಿಕೆ ರಾಜಕೀಯ ವಿಶ್ಲೇಷಣೆ ಮುಂತಾದ ಅಂಶಗಳನ್ನು ಈ ಕಥೆಯಿಂದ ಗುರುತಿಸಬಹುದು. ಸಾಮಾಜಿಕವಾಗಿ ಅಂಟಿಕೊಂಡಿರುವ ವಿವಾಹ ಪದ್ಧತಿ ಸಂಘರ್ಷಕ್ಕೆ ಎಡೆಮಾಡಿಕೊಡುತ್ತದೆ. ಇಲ್ಲಿ ತಿಮ್ಮಿ ಮತ್ತು ನಿಂಗಿಯರ ಜಗಳದ ಸಂದರ್ಭದಲ್ಲಿ ಅವರು ಬಳಸುವ ಭಾಷೆ ಅವರ ನೈತಿಕ ಹೊಣೆಗಾರಿಕೆಯನ್ನು ಪ್ರತಿಬಿಂಬಿಸುತ್ತದೆ. ಇವರೆಲ್ಲರ ಸಂಘರ್ಷದ ಲಾಭಪಡೆಯುವ ಊರಿನ ಜನತೆ ರಾಜಕೀಯ ವಿಶ್ಲೇಷಣೆ ಮಾಡಿ ಅವರಿಗೆ ನ್ಯಾಯ ಒದಗಿಸುತ್ತಾರೆ.

**ಗುಬ್ಬಚ್ಚಿಗಳು:**

ಡಾ. ಕರೀಗೌಡರು ಕೆಲವು ಪ್ರಯೋಗಗಳನ್ನು ಮಾಡಿದ್ದಾರೆ. 'ಗುಬ್ಬಚ್ಚಿಗಳು' ಕಥೆಯಲ್ಲಿ ಗಂಡ-ಹೆಂಡತಿ ದಾಂಪತ್ಯದಲ್ಲಿ ಕಾಣಿಸುವ ಸರಸ-ವಿರಸಗಳ ಸಂಯೋಗವನ್ನು ಜನಪದ ಶೈಲಿಯಲ್ಲಿ ನಿರೂಪಿಸಲಾಗಿದೆ. ಸ್ವಲ್ಪ ಪ್ರಮಾಣದಲ್ಲಿ ಫ್ಯಾಂಟಸಿ ತಂತ್ರವನ್ನು ಬಳಸಲಾಗಿದೆ. ಈ ಕಥೆಯಲ್ಲಿ ಎರಡು ತಲೆಮಾರುಗಳನ್ನು ಸಮಾಗಮ ಮಾಡಲಾಗಿದೆ. ಕಥೆಯಲ್ಲಿ ಬರುವ ಚೆನ್ನಜ್ಜ ಹಳೆತಲೆಮಾರು, ಗುಬ್ಬಚ್ಚಿಗಳು ಹೊಸ ತಲೆಮಾರು. ಈ ಎರಡು ತಲೆಮಾರುಗಳು ಒಂದಾಗಿವೆ. ಚೆನ್ನಜ್ಜ ಹಳೆಯದನ್ನು ನೋಡಿ ಅನುಭವಿಸಿ ಬಂದಿರುವವನು. ತಾನು ಅನುಭವಿಸಿ ಬಂದಿರುವಂತ ಕಥೆಯನ್ನು ಗುಬ್ಬಚ್ಚಿ ಹೇಳುತ್ತದೇನೋ ಎಂಬಂತೆ ಬಾಸವಾಗುತ್ತದೆ. ಇಲ್ಲಿ ಎರಡು ಹೃದಯಗಳ ನಡುವೆ ಭಾವನಾತ್ಮಕ ಸಂಬಂಧ ಏರ್ಪಟ್ಟಿದೆ. ಹೆಣ್ಣು ಗುಬ್ಬಿಯು ಗಂಡು ಗುಬ್ಬಿಯ ಮೇಲೆ ಪಡುವ ಸಂಶಯ ಅಷ್ಟೇನು ಹಳೆಯದೇನು ಅಲ್ಲ. ಅದು ಹಿಂದೆ ಇತ್ತು ಇಂದು ಇದೆ. ಮುಂದೆಯು ಇರುತ್ತದೆ. ಹೆಣ್ಣು ಪಡುವ ಸಂಶಯವು ಸಾಮಾಜಿಕ ಸಂಘರ್ಷಕ್ಕೆ ಎಡೆಮಾಡಿಕೊಡುತ್ತದೆ. 'ಬಾಯಿಂದ ಅಂದಿದ್ದು ಬೆನ್ನಿಗೆ ಮೂಲ' ಎಂಬಂತೆ ತನ್ನ ನೈತಿಕತೆಗೆ ಕಟ್ಟಿದ್ದನ್ನು ತಂದೊಡ್ಡುತ್ತದೆ. ಕಥೆಗಾರರು ನಿರೂಪಕರಾಗಿ ಕಥೆಯನ್ನು ಜನಪದ ಶೈಲಿಯಲ್ಲಿ ನಿರೂಪಿಸುವುದು ತುಂಬಾ ಚೆನ್ನಾಗಿದೆ. ಕಥೆಯು ಮಾನವೀಯ ಸಂಬಂಧ ಹಾಗೂ ಭಾವನಾತ್ಮಕ ಸಂಬಂಧ ಪಡೆಯಲು ಪ್ರಯತ್ನ ನಡೆಸಿದೆ. ಇಲ್ಲಿ ಬರುವ ಗುಬ್ಬಚ್ಚಿಗಳ ಕಥೆಯು, ಅದು ಬರೀ ಕಥೆಯಲ್ಲ ಬದಲಾಗಿ ಶೇಕಡ ಎಪ್ಪತ್ತರಷ್ಟು ಮನೆಗಳಲ್ಲಿ ಗಂಡ-ಹೆಂಡತಿಯರ ನಡುವೆ ನಡೆಯುವ ಜಗಳವಾಗಿದೆ.

**ಒಂದು ಜನಪದ ಕತೆ:**

ಕಥೆಯ ಶೀರ್ಷಿಕೆ ಹೇಳುವ ಹಾಗೆ ಇದೊಂದು ಜನಪದ ಕಥೆಯಾಗಿದ್ದು ಜನಪದ ಶೈಲಿಯಲ್ಲಿಯೇ ನಿರೂಪಿತವಾಗಿದೆ. ಇಲ್ಲಿ ಕಥೆಗಾರರು ನಿರೂಪಕರಾಗಿಲ್ಲ. ಅದರ ಬದಲು

ಅವರ ತಾಯಿ ಕಥೆಗಾರನ ಪಾತ್ರವಹಿಸಿಕೊಂಡು ಈ ಕಥೆಯನ್ನು ನಿರೂಪಿಸಲಾಗಿದೆ. ಈ ಕಥೆಯು ಅಣ್ಣ-ತಂಗಿಯರ ಕುರಿತ ಕಥೆಯಾಗಿದೆ. ಅಣ್ಣ ಸಿದ್ಧಲಿಂಗೇಶ್ವರ ಬೀಚ್ನಳ್ಳಮ್ಮ ಅಕ್ಕ ಹಳೆವೂರಮ್ಮ ತಂಗಿ. ಈ ಕಥೆಯ ವಿಶೇಷವೆನೆಂದರೆ ಹೆಣ್ಣು ಹುಡುಗಿ ದೇವರಾಗಿ ಪರಿವರ್ತನೆಯಾಗುವುದು. ಅಣ್ಣ ಸಿದ್ಧಲಿಂಗೇಶ್ವರ ಮಾಯವಾಗುವುದು. ವಿಶೇಷವಾಗಿದೆ. ಜನಪದ ಕಥೆಯಲ್ಲಿ ಇಂತಹ ಪರಿವರ್ತನೆಗಳು ಸಹಜವಾಗಿದೆ. ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಜಿಗುಪ್ಸೆ, ಒಲ್ಲದ ಮನಸ್ಸನ್ನು ಒತ್ತಾಯಪಡಿಸುವುದು, ಅದರಿಂದಾಗುವ ಪರಿಣಾಮವನ್ನು ಈ ಕಥೆಯಲ್ಲಿ ಕಟ್ಟಿಕೊಡಲಾಗಿದೆ. ಈ ಕಥೆಯಲ್ಲಾದಂತೆ ವಾಸ್ತವಿಕ ಜಗತ್ತಿನಲ್ಲಾಗುವುದು ಸುಲಭ ಸಂಗತಿಯಲ್ಲ. ಆದರೂ ನಮ್ಮ ಗ್ರಾಮೀಣ ಜನತೆಯು ಇಂದಿಗೂ ಇಂತಹ ಐತಿಹ್ಯಗಳನ್ನು ಪವಾಡ ಪುರುಷ ಕಥೆಗಳನ್ನು ನಂಬುತ್ತಾರೆ. ಹಳೆವೂರಮ್ಮ ಹೆಣವನ್ನು ಕೊಪ್ಪರಿಗೆಯಲ್ಲಿ ಬೆಯಿಸಿಕೊಂಡು ತಿನ್ನುವ ಸಂಗತಿಯನ್ನು ಪ್ರಸ್ತುತ ಸಂದರ್ಭಕ್ಕೆ ಅಳವಡಿಸಬಹುದು. ಮಿತಿಮೀರಿ ಬೆಳೆಯುತ್ತಿರುವ ಜನಸಂಖ್ಯೆ ಮುಂದೊಂದು ದಿನ ಆಹಾರಕ್ಕಾಗಿ ಮನುಷ್ಯರನ್ನೆ ಕಿತ್ತು ತಿನ್ನುವ ಪ್ರಸಂಗ ಬರಬಹುದು.

**ಸಂವೇದನೆ:**

ಹಸುವಿನ ಜೊತೆ ಭಾವನಾತ್ಮಕ ಸಂಬಂಧವಿಟ್ಟುಕೊಂಡಿರುವುದರ ಬಗ್ಗೆ ಮಾಹಿತಿಯನ್ನು ಈ ಕಥೆಯು ಕಟ್ಟಿಕೊಡುತ್ತದೆ. ವ್ಯಕ್ತಿಯಲ್ಲಿರುವ ಒಬ್ಬ ವ್ಯಕ್ತಿಯ ಕುಟುಂಬ ಪ್ರಾಣಿಗಳ ಜೊತೆಗೆ ಭಾವನಾತ್ಮಕ ಸಂಬಂಧವಿಟ್ಟಿರುವುದು ತುಂಬಾ ವಿಶೇಷವಾಗಿದೆ. ಒಂದು ವಸ್ತುವನ್ನು ಕಳೆದುಕೊಂಡಾಗ ಅದರಿಂದಾಗುವ ಮಾನಸಿಕ ಯಾತನೆ ಎಂತಹ ಪರಿಣಾಮವನ್ನುಂಟುಮಾಡುತ್ತದೆ ಎಂಬುದನ್ನು ಇಲ್ಲಿ ತಿಳಿಯಬಹುದು. ಸಹಜವಾಗಿ ಸಮಾಜದಲ್ಲಿ ಒಬ್ಬ ಮಹಿಳೆಗೆ ಕಷ್ಟ ಬಂದರೆ, ಒಂದು ಕುಟುಂಬಕ್ಕೆ ಕಷ್ಟ ಬಂದರೆ ಅವರ ಬಗ್ಗೆ ಕನಿಕರ ತೋರಿಸುವುದು ನಮ್ಮ ಸಂಪ್ರದಾಯ. ಆದರೆ ಸಂವೇದನೆ ಕತೆಯಲ್ಲಿ ದಾನವಾಗಿ ಪಡೆದುಕೊಂಡ ಗೋವಿನ ಬಗ್ಗೆ ಸಂವೇದನೆಯನ್ನು ವ್ಯಕ್ತಪಡಿಸುವುದು ತುಂಬಾ ವಿಶೇಷವಾಗಿದೆ. ವಿದ್ಯಾವಂತರಾದವರು ನೈತಿಕವಾಗಿ ಪ್ರಬಲರಾಗುತ್ತಾರೆ. ಆದರೆ ಈ ಕಥೆಯಲ್ಲಿ ಬರುವ ಶಿಕ್ಷಕ (ಮೇಷ್ಟ್ರು) ದುರ್ಬಲನಾಗುತ್ತಾನೆ. ಏಕೆಂದರೆ ತನ್ನ ಹಸು ಹೆಣ್ಣು ಮರಿ ಆಕಲಿಲ್ಲವೆಂದು, ಗಂಡು ಮರಿಯನ್ನು ತೆಗೆದುಕೊಂಡು ಹೋಗಿ ದೂರ ಬಿಟ್ಟು ಬರುವುದು ಅವರ ವ್ಯಕ್ತಿತ್ವಕ್ಕೆ ಕುಂದುಂಟು ಮಾಡುತ್ತದೆ. ಶಿಕ್ಷಕನಾದವನು ಎಲ್ಲಾ ರೀತಿಯಿಂದಲೂ ಯೋಚನೆ ಮಾಡುವ ಶಕ್ತಿ ಹೊಂದಿರುತ್ತಾನೆ. ಆದರೆ ಹಸು ಒಂದು ದಿನ ತಪ್ಪಿಸಿಕೊಂಡು ಹೋದಾಗ ಅದು ಎಲ್ಲಿಗೆ? ಏಕೆ? ಹೋಗಿದೆ ಎಂಬುದು ಯಾರಿಗೂ ತಿಳಿಯಲಾರದ ವಿಷಯ. ಆದರೆ ಹಸು ಗರ್ಭದರಿಸುವುದಕ್ಕೆ ಈ ಮೊದಲೇ ಮೇಷ್ಟ್ರಗೆ ತಿಳಿದಿರಬೇಕಿತ್ತು. ತನ್ನ ಬೆಳೆ ಬೇಯಿಸಿಕೊಳ್ಳಲು ಶಿಕ್ಷಕರಾದವರು ವಿದ್ಯಾರ್ಥಿಗಳನ್ನು ಉಪಯೋಗಿಸಬಾರದು.

**ಒಂದು ಹಳೆಯ ಕತೆ:**

ಇದೊಂದು ಜನಪದ ಶೈಲಿಯಲ್ಲಿ ರಚನೆಗೊಂಡು ಜನಪದ ಕಥೆಯಾಗಿದೆ. ಈ ಕಥೆಯಲ್ಲಿ ಒಬ್ಬ ಬುದ್ಧಿವಂತ ಇನ್ನೊಬ್ಬ ಅವಿದ್ಯಾವಂತರ ಪಾತ್ರ ಚಿತ್ರಣ ಮಾಡಲಾಗಿದೆ. ಈ ಕಥೆಯಿಂದ

ತಿಳಿದುಕೊಳ್ಳಬಹುದಾದ ಬಹುಮುಖ್ಯ ಅಂಶವೆಂದರೆ ಒಂದನೆಯದಾಗಿ ವಿದ್ಯಾವಂತರಾಗಬೇಕು. ಗುರುಗಳನ್ನು ಕೀಲಾಗಿ ಕಾಣಬಾರದು ಅಧಿಕಾರ ದುಷ್ಪತನವನ್ನು ತೋರಿಸಬಾರದು ಎಂಬ ಮುಂತಾದ ಅಂಶಗಳನ್ನು ಗುರುತಿಸಬಹುದು. ಕಥೆಯಲ್ಲಿ ಬರುವ ಕುಲ ಗುರು ರಾಜಜನ್ನು ಕುರಿತು

"ಎಲೈ ರಾಜನೇ, ಪ್ರಪಂಚದಲ್ಲಿ ವಿದ್ಯೆ ಇಲ್ಲದ, ವಿವೇಕ ಇಲ್ಲದ ಮನುಷ್ಯ ಪ್ರಾಣಿಗಿಂತ ಕಡೆ. ಆದ್ದರಿಂದ ನೀನು ವಿದ್ಯೆಕಲಿಯಬೇಕು. ನೀನು ಕಲಿತರೆ ನಿನ್ನ ಪ್ರಜೆಗಳೂ ಕಲಿಯುತ್ತಾರೆ. ನೀನೆ ಕಲಿಯಲಿಲ್ಲ ಅಂದರೆ ಪ್ರಜೆಗಳು, ನಮ್ಮ ರಾಜನಿಗೇ ವಿದ್ಯೆ ಗೊತ್ತಿಲ್ಲ ಹೆಬ್ಬಟ್ಟು ಒತ್ತುತ್ತಾನೆ. ರಾಜ್ಯ ಆಳುತ್ತಾನೆ. ಅಂತದ್ದರಲ್ಲಿ ನಾವು ಯಾಕೆ ಕಲಿಯ ಬೇಕು? ಕಲಿತು ಏನನ್ನು ಸಾಧಿಸಬೇಕು? ಅನ್ನುತ್ತಾರೆಆದ್ದರಿಂದ ನೀನು ಅಕ್ಷರ ಕಲಿಯಲೇಬೇಕು"*ಎಂದು ಹೇಳುತ್ತಾನೆ. ಗುರುವಿನ ಮಾತನ್ನು ನಾವು ಚರ್ಚಿಸುವುದಾದರೆ ಶಾಲೆಯ ಗುರುಗಳು, ಮನೆಯ ಯಜಮಾನ ಆಡಳಿತ ಮಾಡುವ ನಾಯಕರು ಇನ್ನೂ ಮುಂತಾದವರು ತಾವುಗಳು ಕಲಿತು ಮುಂದೆ ತಮ್ಮ ಪೀಳಿಗೆಗೆ ಕಲಿಸುವ ಪ್ರಯತ್ನ ಮಾಡಬೇಕು. ಕುಲಗುರುವಿಗೆ ಮರದಿಂದ ಬಿದ್ದ ಹದ್ದಿನ ಮರಿಯನ್ನು ಕಂಡು ಮನ ಕರಗುತ್ತದೆ. ಅವಿದ್ಯಾವಂತನಾಗಿ ರಾಜ್ಯವಾಳುವ ರಾಜನನ್ನು ಕಂಡು ಗುರುವಿಗೆ ಏಕೆ? ಮನ ಕರಗಬಾರದು ಎಂಬುದೊಂದು ಪ್ರಶ್ನೆಯಾಗಿದೆ. ಕಲಿತವರಿಗೆ ಕಲಿಯದವರು ಶರಣಾಗುವುದು ನಿಜ ಸಂಗತಿ. ಇದು ಕಥೆಯ ಒಟ್ಟು ಗುಟ್ಟಾದ ವಿಷಯ.

**ಅವಶೇಷ:**

ಈ ಕಥೆಯ ಒಳಗೆ ಚಿತ್ರಗೊಂಡ ಪರಿಸರ ಗ್ರಾಮೀಣವಾದದ್ದು. ಪಾತ್ರ ಸನ್ನಿವೇಶ, ಘಟನೆಗಳು ಗ್ರಾಮ ಪರಿಸರಕ್ಕೆ ಸಂಬಂಧಿಸಿದ್ದರೂ, ಕಥೆಯ ತಿರುಳಿನಲ್ಲಿ ವೈಚಾರಿಕತೆ ಸೇರಿಕೊಂಡಿದೆ. ಇವು ಅನುಭಾವಗಳು ಅನುಭವದಕ್ಕಿಂತ, ಕಟ್ಟಿಕೊಂಡ ಅನುಭಾವಗಳಾಗಿವೆ. ಭೌದ್ಧಿಕತೆಯೇ, ವೈಚಾರಿಕತೆಯ ಮೂಲ ಥಾಣವಾಗಿದೆ. ಇಲ್ಲಿ 'ಅನುಭವದ ವಿಸ್ತಾರ'ಕ್ಕೆ ಸಾಕ್ಷಿಯಾದ ಕಥೆಯಾಗಿ ಇದು ಕಾಣುತ್ತದೆ. ಈ ಎರಡು ನೆಲೆಯ ಕಥೆಗಳ ಗುಣಮಟ್ಟದಲ್ಲಿ ವ್ಯತ್ಯಾಸಗಳಾಗಲಿ ಏರುಪೇರುಗಳಾಗಿ ನಿಲ್ಲುವುದಿಲ್ಲ. ಇದೊಂದು ಗುಣಾತ್ಮಕ ಕಥೆಯಾಗಿದೆ.

ಈ ಕಥೆಯಲ್ಲಿ ರೈತ ಮಹಾದೇವಪ್ಪ ಹೊಲದಲ್ಲಿ, ಉಳುವಾಗ ಸಿಕ್ಕ ಕಲ್ಲಿನ ಸ್ಮಾರಕ ಕುತೂಹಲಕ್ಕೆ ಕಾರಣವಾದರೂ, ಊರ ವಿದ್ಯಾವಂತರಿಂದ ನಾನಾ ನೆಪಗಳಿಗೆ ದಾರಿಮಾಡಿ ದೊಡ್ಡ ಪ್ರಕರಣವೇ ನಡೆಯುತ್ತದೆ. ಆ ಅವಶೇಷ ಭೌಯಿಕ ಸ್ವರೂಪವನ್ನು ಶೋಧಿಸಲು ಯತ್ನಿಸಿದಂತೆ ಜಟಿಲವಾಗಿ ಕೊನೆಗೆ ಬೆಳೆ ಬೆಳೆಯುವ ಬಡ ರೈತ ಮಹಾದೇವಪ್ಪನಿಗೆ ಮಾರಕವಾಗುತ್ತದೆ. ಯಾವುದೇ ಒಂದು ವಸ್ತು, ಮೂರ್ತಿ, ಗಿಡ, ಮರ, ಬಳ್ಳಿ, ಬೆಟ್ಟಗುಡ್ಡ, ನಿಸರ್ಗ ಪ್ರತಿಯೊಬ್ಬರಿಗೂ ಒಂದೊಂದು ರೀತಿಯಾಗಿ ಕಾಣುತ್ತದೆ ಎಂಬುದು ಈ ಅವಶೇಷ ಕಥೆಯಿಂದ ತಿಳಿಯಬಹುದು. ಮಹಾದೇವಪ್ಪ ಹೊಲದಲ್ಲಿದ್ದ ಒಂದು ಅವಶೇಷದ ಬಗೆ ಜಾತಿಯಾಧಾರಿತವಾಗಿ ಕಲ್ಪನೆ ಕಟ್ಟುತ್ತಾರೆ 'ಶೈವರಿಗೆ ಸಂಬಂಧಿಸಿದಂತೆ 'ಶಿವನ ಮೂರ್ತಿಯಂತೆ,

'ವೈಷ್ಣವರಿಗೆ ಸಂಬಂಧಿಸಿದಂತೆ ವಿಷ್ಣು ನರಸಿಂಹನ ಮೂರ್ತಿಯಂತೆ ನಂತರ ಬೌದ್ಧರಿಗೆ ಸಂಬಂಧಿಸಿದ 'ಬುದ್ಧ'ನ ವಿಗ್ರಹ ಎಂದು ಹೇಳಿ ಮಹಾದೇವಪ್ಪನ ಹೊಲವನ್ನು ಹಾಳು ಮಾಡಿ ಹೋಗುತ್ತಾರೆ. ಒಟ್ಟಾರೆಯಾಗಿ ಗ್ರಾಮೀಣ ಪ್ರದೇಶದಲ್ಲಿ ನಡೆಯುವ ವಾಸ್ತವಿಕತೆ ಜೊತೆಗೆ ನೈಜತೆಯನ್ನು ಪ್ರತಿಬಿಂಬಿಸಿ ಐತಿಹಾಸಿಕ ಅಂಶಗಳನ್ನು ಮೆಲಕು ಆಗುವಂತೆ ಮಾಡುತ್ತದೆ.

**ಉಗುಳು:**

ಈ ಕಥೆಯಲ್ಲಿ ಊರೊಟ್ಟಿನ ಜಾತ್ರೆಯಲ್ಲಿ, ಮೇಲ್ವರ್ಗದವರು ಕೆಳವರ್ಗದ ಪೂಜಾರಿಯಿಂದ ಉಗುಳಿಸಿಕೊಂಡು ಪುನಿತರಾಗುವ ನಂಬಿಕೆಯೊಂದು ಆಚರಣೆಯಾಗುತ್ತದೆ. ಈ ಕಥೆಯಲ್ಲಿ ನಾಟಕೀಯತೆ ಚೆನ್ನಾಗಿ ವ್ಯಕ್ತವಾಗಿದೆ. ಈ ಸನ್ನಿವೇಶವನ್ನು ಗಮನಿಸಬಹುದು;

"ಆ ದಿನ ಗೌಡರು ಮಂಟಯ್ಯನ......

ಪೂಜಾರ ಪ್ನೋರೆ ತಾವು ಸರಿಯಾಗಿ ನನ್ನ ಮೊಖಕ್ಕೆ ಉಗೀತಾ ಇಲ್ಲ"*

.....ಮುಂದಿನ ಸರದಿಗೆ ಗೌಡರ ಪರಿವಾರ ಕಾದು ನಿಂತಿತ್ತು"*

ಈ ಕಥೆಗಾರರು ಸನ್ನಿವೇಶದ ದೃಷ್ಟಿಯಲ್ಲಿ ಸೃಜಶೀಲತೆ ಎದ್ದು ಕಾಣುತ್ತದೆ. ಗಂಭೀರತೆ, ಹಾಸ್ಯಮಯತೆ, ಕುತೂಹಲ ಎಲ್ಲವೂ ಮೀರಿಕೊಳ್ಳುವ ಸಂಕೇತವಾಗಿ ಇಂಥ ನಂಬಿಕೆ ಆಚರಣೆಗಳು ಸಂಪ್ರದಾಯವಾಗಿ ಸೇರಿಕೊಂಡಿವೆ. ಮೇಲ್ವರ್ಗಗಳೂ ಇಂಥ ನಂಬಿಕೆ-ಆಚರಣೆಗಳನ್ನು ಮಾನ್ಯಮಾಡಿವೆ. ಇಂಥ ವಿಷಯಗಳು ಅಲಕ್ಷಿತ ಸಮುದಾಯಗಳ ಅಧ್ಯಯನದಿಂದ ಶೋಧಗೊಂಡವು. ಇವುಗಳನ್ನು ಬಳಸಿ ಕಥೆ ಕಟ್ಟುವಿಕೆಯಲ್ಲಿ ಒಂದು ನಿರ್ದಿಷ್ಟ ಆಶಯ ವ್ಯಕ್ತಿವಾಗಿದೆ. ಸತ್ತ ಹೆಣಕ್ಕೆ ಕೆಳವರ್ಗದವರು ಗುಂಡಿತೋಡಿದರೆ ಸತ್ತ ವ್ಯಕ್ತಿಗೆ ಮೋಕ್ಷ ದೊರಕುತ್ತದೆ ಸತ್ತವರ ಮನೆಗೆ ಶಾಂತಿ ಸಿಗುತ್ತದೆ ಎಂಬ ಮಾತು ಈ ಕಥೆಯನ್ನು ಓದಿದಾಗ ನನ್ನಲ್ಲಿ ನಂಬಿಕೆಯುಂಟಾಯಿತು. ಬೀಚನಹಳ್ಳಿಯವರು ಬರೆದಿರುವ ಎಲ್ಲ ಕಥೆಗಳಲ್ಲಿ ಈ ಕಥೆಯು ತುಂಬಾ ವಿಶೇಷತೆಯನ್ನು ಪಡೆದುಕೊಂಡು ವಿಶಿಷ್ಟ ಸಂಪ್ರದಾಯವನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ.

**ನೆಲೆನಿಂತ ಮೇಲೆ:**

ಈ ಕಥೆಯು ಒಬ್ಬ ಶಿಕ್ಷಕ ಹಾಗೂ ವೃತ್ತಿಯಿಲ್ಲದ ರಾಮಣ್ಣನ ನಡುವೆ ನಡೆಯುವ ಪ್ರಸಂಗವನ್ನು ತಿಳಿಸುತ್ತದೆ. ರಾಮಣ್ಣ ಬಡತನದಲ್ಲಿ ಜೀವನ ನಡೆಸುತ್ತಿರುತ್ತಾನೆ. ವೃತ್ತಿಯಲ್ಲಿರುವವರ ಮನೆಯಲ್ಲಿರುವ ಕೆಲಸವನ್ನು ನಿರ್ವಹಿಸಿಕೊಂಡು ಕೆಲಸಮಾಡಿ ಮುಗಿಸುವುದು ಇವರ ಕೆಲಸವಾಗುತ್ತು. ಆದರೆ ಅದೃಷ್ಟ ಎನ್ನುವಂತಾದ್ದು. ಒದಿಗಿ ಬಂದು ಅವ ಮುಂದೆ ಮಾಸ್ತರಗಳಿಗೆ ಬೈಕ್ ಕೊಡಿಸುವನಾಗುತ್ತಾನೆ. ರಾಮಣ್ಣನ ಬುದ್ಧಿವಂತಿಕೆ ಚಾಣಾಕ್ಷತೆಯನ್ನು ಇಲ್ಲಿ ಗುರುತಿಸ ಬಹುದು. ಕೆಲವು ಸಂದರ್ಭದಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ ಒಬ್ಬೊರನ್ನ ವಿರೋಧ ಕಟ್ಟಿಕೊಳ್ಳಬೇಕಾಗುತ್ತದೆ. ಆದರೆ ರಾಮಣ್ಣ ಯಾರ ಜೊತೆಯು ವಿರೋಧ ಕಟ್ಟಿಕೊಂಡವನಲ್ಲ ಬದಲಾಗಿ ವಿರೋಧಕ್ಕೆ ಒಳಗಾದ ವ್ಯಕ್ತಿ.

ಸಾಮಾಜಿಕ ವಿರೋಧ, ನೈತಿಕತೆ, ಮುಗ್ಧಮನಸ್ಸುಗಳ ಪರದಾಟ ವೃತ್ತಿ ಬಾಂದವರ ವ್ಯವಹಾರಿಕ ಸಂವೇದನೆ. ರಾಜಕೀಯ ದುಷ್ಟತೆ ನಯಗಾರಿಕೆ ವಯಕ್ತಿಕ ಅಭಿವೃದ್ಧಿ ಮುಂತಾದ ಅಂಶಗಳನ್ನು ಗುರುತಿಸಬಹುದು. ರಾಮಣ್ಣ ಮೇಷ್ಟ್ರು ಹತ್ತಿರ ಹಣತೆಗೆದುಕೊಂಡು ಗಿಡಗಳಿಗೆ ತಿಪ್ಪೆಗೊಬ್ಬರ ಆಕುತ್ತೇನೆ ಎಂದಿದ್ದ ಆದರೆ ಅದು ಅವನ ಸ್ವಂತಿಕೆಯಲ್ಲಿಯೇ ಮುಳುಗಿ ಹೋಯಿತು. ಇದರಿಂದ ರಾಮಣ್ಣ ಮೇಷ್ಟ್ರು ಹತ್ತಿರ ವರೋಧ ಕಟ್ಟಿಕೊಳ್ಳಬೇಕಾಯಿತು. ನಂತರ ಗ್ರಾಸ್ ಕ್ಯಾಪ್ಟಸ್‌ನ್ನು ಕದಿಯಲು ಇಬ್ಬರು ಮಕ್ಕಳನ್ನು ಕಳಿಸಿದ್ದು ಮಕ್ಕಳಿಗೂ ರಾಮಣ್ಣನಿಗೂ ನೈತಿಕತೆಯಿಂದ ದೂರ ಉಳಿಯ ಬೇಕಾಯಿತು. ತಾನು ಬೆಳೆದೆ ಎಂದ ಮಾತ್ರಕ್ಕೆ ತನ್ನವರನ್ನು ಮರೆಯಬಾರದು. ರಾಮಣ್ಣನನ್ನು ಕಂಡ ಮೇಷ್ಟ್ರ ಹೆಂಡತಿ "ನೀವು ಇಪ್ಪತ್ತೈದು ವರ್ಷದಿಂದ ಸರ್ಕಾರಿ ನೌಕರಿ ಅಂತ ದುಡೀತಾ ಇದ್ದೀರಿ ನೋಡಿ! ಅವನು ಆರೇಳು ತಿಂಗಳಲ್ಲಿ ಎಷ್ಟು ಸಂಪಾದ್ನೆ ಮಾಡವ್ನೆ"* ತನ್ನ ಹೆಂಡತಿಯು ಮೇಷ್ಟ್ರನ್ನು ಕೇಳುತ್ತಾಳೆ. ಅಂದರೆ ಇದರರ್ಥ ಸರ್ಕಾರಿ ಕೆಲಸದಲ್ಲಿರುವವರು ನೆಮ್ಮದಿಯಿಂದಿರಬಹುದೇ ಹೊರತು ಹಣ ಸಂಪಾದನೆ ಮಾಡಲು ಸಾಧ್ಯವಿಲ್ಲ ಎಂಬುದನ್ನು ತಿಳಿಯಬಹುದು. ಅಂದರೆ ಇಲ್ಲಿ ನೌಕರಿಗಿಂತ ವ್ಯವಹಾರ ಮಾಡುವುದು ಸೂಕ್ತ ಎಂದು ಬಯಸಿದರೆ ಅವನು ಮಾಡುತ್ತಿದ್ದ ಕೆಲಸ ಮೊಸದ ಕೆಲಸ, ವಂಚನೆ ಮಾಡಿ ಹಣ ಸಂಪಾದನೆ ಮಾಡುತ್ತಿದ್ದನು. ಬೀಚನಹಳ್ಳಿ ಅವರಿಗೆ ಈ ಸನ್ನಿವೇಶ ಪರಿಚಯಿಸಿದ್ದು ಯಾಕೆಂದರೆ ಇಂತಹ ಮೊಸದ ವ್ಯವಹಾರ ಇಂದಿನ ದಿನಗಳಲ್ಲಿ ನಡೆಯುತ್ತಿವೆ ಎಂಬುದನ್ನು ಹೇಳ ಹೊರಟಿದ್ದಾರೆ. ಹಾಗಯೇ ಇಲ್ಲಿ "ರಾಗವೇಂದ್ರ ಪ್ರವಿಷನ್ಸ್ ಸ್ಟೋರ್ಸ್" ಹಾಗೂ "ಪ್ರೊಫೆಸರ್ ಕಾಮಣ್ಣ" ಈ ಎರಡು ಹೆಸರುಗಳನ್ನು ರಾಮಣ್ಣ ತಪ್ಪು-ತಪ್ಪು ಬರೆಸಿದ್ದಾನೆ ಏಕೆಂದು ಕೇಳಿದರೆ ಅದಕ್ಕೆ ನನ್ನ ಅಂಗಡಿಯ ಹೆಸರು ನೋಡಿ ಎಲ್ಲರೂ ನಗಬೇಕು ನನ್ನಂಗಡಿ ಹೆಸರು ಎಲ್ಲರಿಗೂ ಗೊತ್ತಿರಬೇಕೆಂದು ಹೇಳುತ್ತಾನೆ. ಇಲ್ಲಿ ಒಂದು ರೀತಿಯಲ್ಲಿ ಕನ್ನಡಕ್ಕೆ ಅವಮಾನ ಮಾಡಿದ ಹಾಗೆ ಆಗುತ್ತೇ ಇದನ್ನು ಬೀಚನಹಳ್ಳಿಯವರು ವಿರೋಧ ಮಾಡಬೇಕಿತ್ತು. ಕಥೆಯಲ್ಲಿಯೇ ಬೇರೆ ಯಾವುದಾದರೂ ಒಂದು ಪಾತ್ರವನ್ನು ಸೃಷ್ಟಿಸಿ ಆತನಿಂದ ಕನ್ನಡ ಅಕ್ಷರಗಳ ಬಗ್ಗೆ ವಿರೋಧ ಮಾಡಿಸಬೇಕಿತ್ತು. ಆದರೆ ಇದನ್ನು ಹಾಗೆಯೇ ಬಿಟ್ಟಿರುವುದು ಮುಂದಿನ ಪೀಳಿಗೆಯ ಜನತೆಯು ಅದನ್ನೆ ರೂಢಿಸಿಕೊಂಡು ಮುಂದುವರಿಯುತ್ತಾರೆ. ಅದು ಕನ್ನಡ ಭಾಷೆಗೆ ಕಳಂಕ ತರಬಹುದು ಎನ್ನುವ ಅಭಿಪ್ರಾಯ ನನ್ನದಾಗಿದೆ. ಕಥೆಯು ಸಂಭಾಷಣೆಯ ಮೂಲಕ ನಾನಾ ದಿಕ್ಕಿನತ್ತ ಹೋಗುತ್ತದೆ.

**ಸಾರವಿಸ್ತಾರ:**

ಈ ಕಥೆಯು ಒಂದು ಕುಟುಂಬದಲ್ಲಿರುವ ಹಡೆದ ಇಬ್ಬರು ಬಾಣಂತಿಯರ ತಾಯ್ತನವನ್ನು ಹಾಗೂ ಅವರ ಸಂವೇದನೆಯನ್ನು ಕುರಿತು ಹೇಳುವ ಕತೆಯಾಗಿದೆ. ಬೀಚನಹಳ್ಳಿಯವರು ಗ್ರಾಮೀಣ ಬದುಕನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಮುಖ್ಯವಾಗಿ ಹನ್ನೆರಡರಿಂದ-ಹದಿಮೂರು ವರ್ಷದ ಗಂಡುಮಕ್ಕಳನ್ನು ಗುರುತಿಸಿದ್ದಾರೆ. ಅಂದರೆ ಹಳ್ಳಿಯ ಬದುಕಿನಲ್ಲಿ ದಿನನಿತ್ಯ ಇವರ

ಪಾತ್ರವೇನು? ಎಂಬುದನ್ನು, 'ಒಂದು ಅಪೂರ್ವ ಸಂಸಾರ' 'ಕಳಕಳಿ' 'ಸಾರವಿಸ್ತಾರ', ಹೀಗೆ ಕೆಲವು ಕಥೆಗಳಲ್ಲಿ ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ. ಈ ಕಥೆಯ ಮತ್ತೊಂದು ವಿಶೇಷವೆಂದರೆ ತನ್ನಕ್ಕನ ಹಾಲನ್ನು 'ತಮ್ಮ' ಕುಡಿಯುವುದು. ಅಕ್ಕನ ಮೂಲೆಹಾಲು ಕುಡಿದರೆ ಮಾತ್ರ ಅಕ್ಕನಿಗೆ ತಲೆನೋವು ಸ್ವಲ್ಪ ಕಡಿಮೆಯಾಗುವುದು. ಈಕೆಯು ಕೊನೆಯಲ್ಲಿ ಎದೆ ನೋವು ತಾಳಲಾರದೆ ಸಾವನ್ನಪ್ಪುತ್ತಾಳೆ.

ಸಮಾಜದಲ್ಲಿ ಕೆಲವರು ಇದ್ದು ಹೆಚ್ಚಾಗಿ ಸಾಯುತ್ತಾರೆ. ಇನ್ನೂ ಕೆಲವರು ಇಲ್ಲದೆ ಕೊರಗಿ-ಕೊರಗಿ ಸಾಯುತ್ತಾರೆ, ಅಕ್ಕನ ಎದೆಯಲ್ಲಿ ಹುಕ್ಕುತ್ತಿರುವ ಹಾಲನ್ನು ನೆನಪಿಸಿಕೊಂಡರೆ ಹಾಲಿಲ್ಲದೇ ಅಳುತ್ತಿರುವ ಮಗು ಹಾಗು ತಾಯಿಯ ಸಂವೇದನೆ, ಹಾಲಿದ್ದು ಅದನ್ನು ಸದುಪಯೋಗ ಪಡಿಸಿಕೊಳ್ಳಲಾಗದೇ ಎದೆನೋವು, ತಲೆನೋವಿನ ವೇದನೆಯಿಂದ ಸಾಯುವ ಕೆಲವು ನಿದರ್ಶನ ಕಂಡು ಬರುತ್ತವೆ. ಇತ್ತಚೇಗೆ ಮೂವತ್ತು ವರ್ಷದ ಮಹಿಳೆಯರಿಗೆ ಸ್ತನಕ್ಯಾನ್ಸರ್ ಬರುತ್ತಿರುವುದನ್ನು ಗಮನಿಸಬಹುದು ಆದರೆ ಗ್ರಾಮೀಣ ಪ್ರದೇಶದ ಜನತೆಗೆ ಇದು ಕಡಿಮೆ ಅನಿಸುತ್ತದೆ. ಆದರೆ ಈ ಕಥೆಯ ದೃಷ್ಟಿಕೋನ ಬೇರೆ ರೀತಿಯಲ್ಲಿರಬಹುದು. ಬೀಚನಹಳ್ಳಿಯವರು ತಾವು ವಾಸವಾಗಿದ್ದ ಪ್ರದೇಶದ ಸುತ್ತಮುತ್ತಲಿನ ಹಳ್ಳಿಗಳ ಮಹಿಳೆಯರ ಸ್ಥಿತಿಗತಿಯನ್ನು ಕಟ್ಟಿಕೊಡಲು ಬಹುಶಃ ಈ ಕಥೆಯನ್ನು ರಚಿಸಿರಬಹುದು ಎಂದೆನಿಸುತ್ತದೆ. ಒಟ್ಟಾರೆಯಾಗಿ ಗ್ರಾಮೀಣ ಮಹಿಳೆ ಅನುಭವಿಸುವ ಕಷ್ಟ ಸಂಕಟ ವೇದನೆಯನ್ನು ಬೀಚನಹಳ್ಳಿ ಅವರು ಸಮಾಜಕ್ಕೆ ತಿಳಿಯಪಡಿಸಲೆತ್ನಿಸಿದ್ದಾರೆ.

**ಗುಣಮುಖ:**

ಈ ಕಥೆಯಲ್ಲಿ ನಗರ ಜೀವನ ಮತ್ತು ಗ್ರಾಮೀಣ ಜೀವನ ಎರಡು ಮುಖಾಮುಖಿಯಾಗಿ ಅವರು ಯಾವ ರೀತಿ ಜೀವನ ನಡೆಸುತ್ತಾರೆ ಎಂಬುದನ್ನು ತಿಳಿಸಲು ಬೀಚನಹಳ್ಳಿಯವರು ಪ್ರಯತ್ನಿಸಿದ್ದಾರೆ. ಆಧುನಿಕತೆ ತಾಂತ್ರಿಕತೆ, ಹಳ್ಳಿಗಳ ನಗರೀಕರಣದಲ್ಲಿಯೂ ಸಹ ಮೂಢನಂಬಿಕೆ, ಮಾಟ, ಮಂತ್ರ, ಪೂಜೆ ನಂಬುತ್ತಿರುವುದು ಹಳ್ಳಿಗರ ಮೌಢ್ಯತೆಯನ್ನು ಗುರುತಿಸುತ್ತದೆ. ಕಥೆಯಲ್ಲಿ ಬರುವ ರಾಜು ಎಡಗಾಲು ನೋವಿಗೆ ದೇವರ ಪೂಜೆ, ಮಾಟ, ಮಂತ್ರ, ಗಿಡಮೂಲಿಕೆ, ಆಸ್ಪತ್ರೆಗೆ ಮುಂತಾದವುಗಳಿಂದ ಶೂಶ್ರುಷೆ ಮಾಡಿಸುತ್ತಾರೆ. ಅಷ್ಟಾದರೂ ಸಹ ಅದು ವಾಸಿಯಾಗದೇ ಕೊನೆಗೆ ಲಕ್ವ ಹೋಡೆದಿದೆ (ಪಾರ್ಶಿ) ಎಂಬಲ್ಲಿಗೆ ಬರುತ್ತದೆ.

ಸರಿಯಾಗಿ ನೋಡದ ಡಾಕ್ಟರ್ ಹಣೆಬರಹವನ್ನು ನೋಡಿ ಗುಣಮುಖ ಮಾಡುವವರನ್ನು ಕುರಿತು, ಬೀಚನಹಳ್ಳಿ ಚೆನ್ನಾಗಿ ಚಿತ್ರಿಸಿದ್ದಾರೆ. ಕೆಲವು ಡಾಕ್ಟರು ಆತನ ಕಾಲು ತೆಗೆಯಬೇಕು ಎಂದರು ಕೆಲವು ಈತನು ಹೀಗೆಯೇ ಇರುತ್ತಾನೆ ಎಂದು ಹೇಳುವುದು ಹೆಂಡಿತಿ ಮಕ್ಕಳಿಗೆ ಆತಂಕ ಉಂಟುಮಾಡುತ್ತದೆ. ಇದು ಕಥೆಯಲ್ಲಿರುವವರಿಗೆ ಮಾತ್ರ ಅನ್ವಯಸದೇ ಸಮಾಜದ ಮೇಲೆ ಘಾಢವಾದ ಪರಿಣಾಮ ಬೀರುತ್ತದೆ. ತನ್ನ ಗೆಳೆಯನ ಸಹಾಯದಿಂದ ತನ್ನ ಶರೀರವನ್ನು ಸ್ಕ್ಯಾನಿಂಗ್ ಮಾಡಿಸಿದ ಮೇಲೆ ಗಡ್ಡೆ ಇದೆ ಎಂದು ಗೊತ್ತಾದ ಮೇಲೆ

ಖಾಯಿಲೆ ವಾಸಿಯಾಗುತ್ತದೆ. ಶರೀರಕ್ಕೆ ಒದಗಿ ಬಂದಿರುವ ಖಾಯಿಲೆಯನ್ನು ನೇರವಾಗಿ ಡಾಕ್ಟರ್ ಹತ್ತಿರ ತೋರಿಸಬೇಕೇ ಹೊರತು ಮೂಢನಂಬಿಕೆಗಳಿಗೆ ಮಾರು ಹೋಗಬಾರದು ಎಂಬುದು ಇದರ ಒಟ್ಟು ಸಾರವಾಗಿದೆ.

**ಅವ್ವ:**

ಈ ಕಥೆಯಲ್ಲಿ ತಾಯಿ–ಮಗುವಿನ ಋಣಾನುಬಂಧ ಸನ್ನಿವೇಶ ಮೂಢಿ ಬಂದಿದೆ. 'ಅವ್ವ' ಎಂದಾಕ್ಷಣ 'ಪಿ. ಲಂಕೇಶ' ಜ್ಞಾಪಕಕ್ಕೆ ಬರುತ್ತಾರೆ. ಇತ್ತೀಚಿನ ದಿನಗಳಲ್ಲಿ ಒಂದು ವದಂತಿ ಹರಡಿಕೊಂಡಿದೆ. ಅದು ಏನೆಂದರೆ ತಂದೆ–ತಾಯಿಗಳು ಮಕ್ಕಳನ್ನು ಸಾಕಿ ಸಲುಹಿ ಅವರಿಗೆ ಕೆಲಸ ಕೊಡಿಸುತ್ತಾರೆ. ಕೆಲಸ ಸಿಕ್ಕು ಪಕ್ಕದಲ್ಲಿ ಹೆಂಡತಿ ಬಂದರೆ ತಂದೆ–ತಾಯಿಯನ್ನು ನೆನೆಸುವುದಿಲ್ಲ. ಅವರ ಯೋಗಕ್ಷೇಮ ನೋಡುವುದಿಲ್ಲ. ಅಣ್ಣ–ತಮ್ಮಂದಿರನ್ನು ಕಡೆಗಣಿಸುತ್ತಾರೆ ಎಂಬ ವದಂತಿಯು ಇತ್ತೀಚಿಗೆ ಕೇಳಿ ಬರುತ್ತಿದೆ. ಆದರೆ ಕಥೆಗಾರರಾದ ಬೀಚನಹಳ್ಳಿ ಅವರು ಈ ವದಂತಿಗೆ ತಕ್ಕ ಉತ್ತರ ನೀಡಿ ಅದನ್ನು ಸುಳ್ಳು ಎಂದು ಸಾಬೀತು ಪಡಿಸಲು ಹೊರಟಿದ್ದಾರೆ. ಅದರಲ್ಲಿಯೇ ವಿದ್ಯಾವಂತ ಮಕ್ಕಳೇ. ತಂದೆ–ತಾಯಿ ಸಂಬಂಧವನ್ನು ಮರೆಯುತ್ತಾರೆ ಎನ್ನುತ್ತಿದೆ. ಸಮಾಜ ಅದನ್ನು ಸ್ವಲ್ಪ ಒರೆಗಲ್ಲಿಗಚ್ಚಿ ನೋಡಬೇಕು. 'ಬೀಚನಹಳ್ಳಿ' ಅವರು ರಚಿಸಿ ಕೊಟ್ಟ 'ಅವ್ವ' ಕಥೆಯಲ್ಲಿ ವೃತ್ತಿಯಲ್ಲಿರುವ ಮಗ ತನ್ನವ್ವನನ್ನು ತಾನಿರುವ ನಗರಕ್ಕೆ ಕರೆದುಕೊಂಡು ಹೋಗುತ್ತಾನೆ. ತನ್ನವ್ವ ಬಂದು ಒಂದುವಾರ ಕೂಡ ಆಗಿರಲಿಲ್ಲ ಆಗ ತನ್ನವ್ವ ಹೀಗೆ ಕೇಳುತ್ತಾಳೆ.

"ನನಗೆ ಈ ಪಟ್ಟಣದಲ್ಲಿ ಇರೋಕೆ ಆಗಲ್ಲ. ಕರೆಟಂಲಿ ಬೇಯಿಸೊ ಕೂಳು
ಕಕ್ಕಸ್ ಮನೆ ಅದೆಂತೆದೋ ಹಾಸ್ಗೆ ಇವೆಲ್ಲಾ ನನಗೆ ಕಕರು ಮಕರುಹಿಡಿಸಿ
ಬಿಟ್ಟಿವೆ ಒಂದುವಾರ ಇದ್ದ ನನಗೆ ಒಂದು ಯುಗಾನೇ ತುಂಬಿದಂತಾಗಿದೆ.
ಮೊದಲು ನನ್ನ ಊರ್ಗೆ ಬಸ್ಸು ಹತ್ತಸ್ತಿಯಾ?"* ಎಂದಳು.

ಕಥೆಗಾರರು ಒಂದೇ ವೇದಿಕೆಯಲ್ಲಿ ಎರಡು ಯುಗಗಳನ್ನು ಹಾಜರುಪಡಿಸಲು ಹೊರಟಿದ್ದಾರೆ. ಒಂದನೆಯದು ಗ್ರಾಮ ಮತ್ತು ನಗರ ಜೀವನದ ಮುಖಾಮುಖಿ, ಎರಡನೆಯದು ಹಳೆತಲೆಮಾರು ಹಾಗೂ ಹೊಸತಲೆಮಾರಿನ ಮುಖಾಮುಖಿ ಮಾಡಲು ಹೊರಟಿದ್ದಾರೆ. ಇಂದಿನ ಆಧುನಿಕ ಕಾಲದಲ್ಲಿ ಹಳೆಯ ಪದ್ಧತಿ ನಿಲ್ಲುವುದಿಲ್ಲ. ಆದರೆ ಹಳೆತಲೆಮಾರಿನವರೇ ಹೆಚ್ಚು ಕಾಲ ಬದುಕುತ್ತಾರೆ. ಈ ಕಥೆಯಲ್ಲಿ ಬರುವ ತಾಯಿಯ ವಯಸ್ಸು ಎಪ್ಪತ್ತು ದಾಟಿತ್ತು. ಕಥೆಗಾರರು ಕಥೆಯನ್ನು ತಾಯಿ–ಮಗುವಿನ ಸಂಭಾಷಣೆಯ ಮೂಲಕ ತಾವೆ ನಿರೂಪಿಸಿದ್ದಾರೆ.

**ಎಲ್ಲೋ ಜೋಗಪ್ಪ ನಿನ್ನರಮನೆ:**

'ಗಂಡ ಹೆಂಡತಿ ನಡುವೆ ಕೂಸು ಬಡವಾಯಿತು' ಎಂಬಂತೆ ಅಣ್ಣ–ತಮ್ಮರ ನಡುವೆ ಮಗಳು (ಅಣ್ಣನ ಮಗಳು) ಬಡವಾಗುವ ಸಂಗತಿ ಇಲ್ಲಿ ಕಥೆಗಾರರು ಕಟ್ಟಿಕೊಟ್ಟಿದ್ದಾರೆ. ಈ ಕಥೆಯ ಮೂಲಕ ನಿರೂಪನೆಯಾಗಿದೆ. ಎಲ್ಲೋ ಹುಟ್ಟಿ, ಎಲ್ಲೋ ಬೆಳೆದು, ಎಲ್ಲೋ ಜೀವಿಸುವುದು ಜೀವನದ ಸಹಜತೆಯಾಗಿದೆ. ಅದರಲ್ಲಿಯು ಹೆಣ್ಣಿನ ಜೀವನ ನೂರಕ್ಕೆ

ನೂರರಷ್ಟು ಸತ್ಯ. ಈ ಕಥೆಯಲ್ಲಿ ಪಾತ್ರಗಳ ಹೆಸರುಗಳು ಗೌಣವಾಗಿವೆ. ಅಣ್ಣ ಹಳ್ಳಿಯಲ್ಲಿರುತ್ತಾನೆ. ತಮ್ಮ ನಗರದಲ್ಲಿದ್ದು ಕೆಲಸಕ್ಕೆ ಸೇರಿ ಕೊಂಡಿರುತ್ತಾನೆ. ಅಣ್ಣ, ಮಗಳನ್ನು ತಮ್ಮನ ಮನೆಯಲ್ಲಿಯೇ ಬಿಟ್ಟಿರುತ್ತಾನೆ. ಸಣ್ಣಾಗಿನಿಂದಲೂ ತಮ್ಮನೇ ಸಾಕಿರುತ್ತಾನೆ. ಬೆಳೆದು ವಿವಾಹದ ವಯಸ್ಸಿಗೆ ಬರುತ್ತಾಳೆ. ಹಾಗೆ ಆಕೆಯು ತನ್ನನ್ನು ಇಷ್ಟ ಪಡುವವನ ಜೊತೆ ಪ್ರೀತಿ ಮಾಡಿರುತ್ತಾಳೆ. ತಂದೆ-ಚಿಕ್ಕಪ್ಪ ಬೇರೆ ಕಡೆ ಸಂಬಂಧ ಬೆಳೆಸಲು ಪ್ರಯತ್ನ ಪಡುತ್ತಾರೆ. ಆದರೆ ಮಗಳು ಅದಕ್ಕೆ ಕಡಿವಾಣ ಹಾಕಿ ಪ್ರೀತಿಸಿದವನನ್ನೆ ವಿವಾಹವಾಗುತ್ತಾಳೆ. ಕೊನೆಯಲ್ಲಿ ಕಥೆಗಾರರು ವಿವಾಹವಾಗುವುದನ್ನು ಪ್ರಸ್ತಾಪಿಸಿಲ್ಲ.

"ನನ್ನ ಸ್ವಾತಂತ್ರ್ಯದ ಆಯ್ಕೆಯ ಹಾದಿಯಲ್ಲಿ ಅನೇಕ ಮುಳ್ಳುಗಳಿಲ್ಲ ಎಂಬುದು ಯಾವ ಗ್ಯಾರಂಟಿ!"* ಈ ರೀತಿ ಯೋಜನೆ ಮಾಡುವ ಹೆಣ್ಣು ಆಯ್ಕೆಯ ವಿಷಯದಲ್ಲಿ ತೊಡಗಿರುತ್ತಾಳೆ. ಆಕೆಗೆ ಕಲ್ಲು ಮುಳ್ಳುಗಳಿದ್ದರೂ ಚಿಂತೆಯಲ್ಲ ಸುಖ ಬೇಕು ಎಂಬುದು ಒಂದು ಸಮಾಜ ಸುಖವಿಲ್ಲದಿದ್ದರೂ ಕಷ್ಟವಿರಬಾರದು ಎಂಬುದು ಮತ್ತೊಂದು ಸಮಾಜ. ತಂದೆ-ತಾಯಿಗಳು ಮಕ್ಕಳಿಗೆ ಆಯ್ಕೆಗೆ ಅನುಮತಿ ನೀಡುವುದು ಒಳಿತೇನಿಸುತ್ತದೆ. ಇದರಿಂದ ಜಾತಿ ನಿರ್ಮೂಲನೆ ಬೇದ ಭಾವವನ್ನು ಕಿತ್ತೇಸೆಯಬಹುದಾಗಿದೆ.

**ಕರಡಿ ಕುಣಿತ:**

ಈ ಹಿಂದಿನ ಕಥೆಗಳಲ್ಲಿ ಕಥೆಗಾರರು ಕೇವಲ ಎರಡು ಕ್ಷೇತ್ರಗಳು, ಎರಡು ವಲಯಗಳು, ಎರಡು ತಲೆಮಾರುಗಳನ್ನು ಇಬ್ಬರು ವ್ಯಕ್ತಿಗಳನ್ನು ಮಾತ್ರ ತಮ್ಮ ಕಥೆಗಳಲ್ಲಿ ಪಾತ್ರಗಳಾಗಿ ಪ್ರತಿಬಿಂಬಿಸಿದ್ದಾರೆ. ಗ್ರಾಮೀಣ-ನಗರ, ತಂದೆ-ಮಗ, ತಾಯಿ-ಮಗ, ಹಿಂದೂ ಧರ್ಮ-ಮುಸ್ಲಿಂ ಧರ್ಮ, ಗಂಡ-ಹೆಂಡತಿ ಈ ರೀತಿಯಾಗಿ ಜೋಡಿ-ಜೋಡಿಯಾಗಿ ಪರಿಚಯಿಸಲಾಗಿತ್ತು. 'ಸಂವೇದನೆ' ಕಥೆಯಲ್ಲಿ ತನ್ನ ಗಂಗೆಗಾಗಿ ಸಂವೇದನೆ ಪಟ್ಟವರು 'ಮೇಷ್ಟ್ರು'ದರೆ, 'ಕರಡಿ ಕುಣಿತ' ಕಥೆಯಲ್ಲಿ ಕರಡಿಗಾಗಿ ಶಿಕ್ಷೆ ಅನುಭವಿಸಿ ಕರಡಿಯನ್ನು ಸಾವಿನಂಚಿನಲ್ಲಿಗೆ ದೂಡಿ ಕೊನೆಯಲ್ಲಿ "ಕರಡಿಯ ಹೆಣ ಕೊಡಿ ನಮಗೆ"* ಎಂದು ಕರಡಿಯ ಕುಣಿತದವರು ಗದ್ದಲದ ಜಂಗುಳಿಯಲ್ಲಿ ಕೂಗುತ್ತಿದ್ದರು.

ಬೀಚನಹಳ್ಳಿಯವರು ಕರಡಿ ಕುಣಿತ ಕಥೆಯನ್ನು ಪಾತ್ರಗಳ ಸಂಭಾಷಣೆಯ ಮೂಲಕ ಕೊಂಡೋಯ್ಯುವುದರಲ್ಲಿ ಯಶಸ್ವಿಯಾಗಿದ್ದಾರೆ. ಇದಕ್ಕೆ ಗ್ರಾಮೀಣ ಸಮುದಾಯದ ಭಾಷೆಯನ್ನು ಅಳವಡಿಸಿಕೊಂಡಿರುವುದು ಸೂಕ್ತವಾಗಿದೆ. ಇದರಲ್ಲಿ ಪ್ರಮುಖವಾಗಿ ಗುರುತಿಸಲೇ ಬೇಕಾದ ಅಂಶವೆಂದರೆ ರಾಜಕೀಯ, ಸರ್ಕಾರ, ಜೀವನಪರಿಯಂತ ಇರುವುದು ರಾಜಕೀಯ ಮಾಸ್ತಿಗೌಡರು ಇವರು ತಾತ್ಕಾಲಿಕ ಮನುಷ್ಯರು ಕೇವಲ ಐದು ವರ್ಷದ ಅಧಿಕಾರಿಗಳಾದರೇ ಸರ್ಕಾರ ಅಂದರೆ ಪೊಲೀಸ್ ಇಲಾಖೆಯವರು ತಮ್ಮ ಜೀವಿತಾವಧಿ ಅಂದರೆ ಅರವತ್ತು ವರ್ಷಗಳವರೆಗೆ ಇರುವವರು, ಹಾಗೆಯೇ ಇವರೆಲ್ಲರ ಸಮಾಲೋಚನೆಯನ್ನು ನೋಡುತ್ತಾ ಕುಳಿತ ಕಥೆ-ಕಾದಂಬರಿಕಾರ ಮೋಹನ. ಈ ಮೂವ್ವರಿಗೆ ಒಂದಲ್ಲಾ ಒಂದು ರೀತಿಯಲ್ಲಿ ಜೀವನ ನಡೆಸಲು ಹಣ ಸಂಪಾದನೆ ಮಾಡುತ್ತಾರೆ. ಆದರೆ ಹಣ ಸಂಪಾದನೆ ಮಾಡಲೆಂದು

ಬಂದವರು ಕರಡಿಯ ಕುಣಿಸುವವರು. ಇವರಿಗೆ ಯಾವ ರೀತಿಯಿಂದಲೂ ಹಣ ಸಂಪಾದನೆ ಮಾಡಲಾಗುವುದಿಲ್ಲ. ಈ ಎಲ್ಲರನ್ನು ಒಂದೇ ವೇದಿಕೆಯಲ್ಲಿ ಹಾಜರುಪಡಿಸಿರುವುದು ಕಥೆಗಾರರು ಮಾಡಿರುವ ಬಹುಮುಖ್ಯ ಪ್ರಯತ್ನವಾಗಿದೇ "ಅತ್ತಗೆ ಆ ಮುಂಡೆ ಮಕ್ಕಳ ಬಿಟ್ಟು ಓಡಿಸಿ, ಇನ್ನೊಂದು ಸಾರಿ ಈ ಪೇಟೆ ಕಡೆ ಬರ್ಬೇಡಿ ಅಂಥ ಹೇಳಿ"* ಎನ್ನುವ ಎಂ.ಎಲ್.ಎ ಮಾತು ಹೊಟ್ಟೆಗೆ ಹಿಟ್ಟಿಲ್ಲದಿದ್ದರು ಪರವಾಗಿಲ್ಲ ಇವರಿಗೆ ಕಾಟ ಕೊಡಲು ಅವರತ್ರ ಬರಬಾರದು ಎಂಬ ಉದ್ದೇಶವನ್ನಿಟ್ಟುಕೊಂಡು ಈ ಮಾತು ಹೇಳುತ್ತಾನೆ. ಆದರೆ ಇದನ್ನು ಕಥೆಗಾರರು ಸ್ವಲ್ಪ ಬದಲಾವಣೆಯತ್ತ ತೆಗೆದುಕೊಂಡು ಹೋಗಬೇಕು ಅಂದರೆ ಹಸಿದವರಿಗೆ ಅನ್ನ ಸಿಗಬೇಕು. ತಮ್ಮಿಂದ ಓಟು ಪಡೆದು ರಾಜಕೀಯ ಪ್ರವೇಶ ಪಡೆದವರು ಹಳ್ಳಿಗಳತ್ತ ಗಮನ ಹರಿಸಬೇಕು. ರೈತರ ಕಷ್ಟಗಳನ್ನು ಅರ್ಥ ಮಾಡಿಕೊಳ್ಳುವಂತೆ ಮಾಡಬೇಕು.

"ನೋಡಿದ್ರ ಮೋಹನ್! ನೀವು ಒಂದು ವಾರ ನನ್ನ ಜೊತೆ ಇರಿ, ಇನ್ನೂ ಎಂತೆಂಥ ಜನ ಏನೇನು ಸಮಸ್ಯೆಗಳನ್ನು ನನ್ನ ಹತ್ತಿರಕ್ಕೆ ತರ್ತಾರೆ ಎಂಬುದು ನಿಮಗೆ ತಿಳಿಯುತ್ತದೆ ನಿಮಗೆ ಕಥೆ ಕಾದಂಬರಿ ಬರೆಯುವುದಕ್ಕೆ ಸರಕು ಸಿಗಬಹುದು. ನಾವು ರಾಜಕಾರಣಿಗಳು ದಿನ ಬೇಳಗಾದರೆ ಇವುಗಳನ್ನೆಲ್ಲಾ ಎದುರಿಸಬೇಕು. ಗಂಡ ಹೆಂಡತಿ ಬಿಟ್ಟ ಜಗಳ ಗುಡ್ಡೆ ಮಾಂಸದ ಹೊಡೆದಾಟ ಭೂಮಿ ಒತ್ತುವರಿ ಕಿತ್ತಾಟ, ಊರ ಪಂಚಾಯ್ತಿ ಹೀಗೆ ತರಲೆ ತಾಪತ್ರೆಗಳನ್ನೆಲ್ಲಾ ನಾವು ಬಗೆ ಹರಿಸಬೇಕು. ನೋಡಿ"*

ಇಲ್ಲಿ ಎಂ.ಎಲ್.ಎ.ಯ ಮಾತುಗಳನ್ನು ನೋಡಿದರೆ ಕಥೆ ಕಾದಂಬರಿಯನ್ನು ಎಂ.ಎಲ್.ಎ.ಗೆ ಸಂಬಂಧಿಸಿದುವುಗಳನ್ನು ರಚಿಸಬೇಕಾಗುತ್ತದೆ. ಲೇಖಕನಾದವನು ರಾಜಕೀಯ ಅಂಶಗಳನ್ನು ಇಟ್ಟುಕೊಂಡು ಬರೆಯುವುದಕ್ಕಿಂತ ನೈಜತೆಯನ್ನು ಕುರಿತು ಬರೆದರೆ ಒಳಿತು. ಕೊನೆಯ ಮಾತುಗಳನ್ನು ನೋಡಿದರೆ ನಮ್ಮಿಂದ ಓಟು ಪಡೆದು ಆರಾಮವಾಗಿರಲು ಹೋಗುತ್ತಾರೇನೋ ಎಂಬಂತೆ ಕಾಣಿಸುತ್ತದೆ. ಇವರು ಬಗೆಹರಿಸದೇ ಬೇರೆಯವರು ಬಂದು ನ್ಯಾಯ ತಿರ್ಮಾನ ಮಾಡುತ್ತಾರೋ 'ಜನ ಸೇವೆಯೇ ಜನಾರ್ದನ ಸೇವೆ' ಎಂದು ಸಮಸ್ಯೆಗೆ ತಕ್ಕ ಪರಿಹಾರ ನೀಡಿ ಬಗೆಹರಿಸಿದರೆ ಅಂತವರು ಒಳ್ಳೆಯ ವ್ಯಕ್ತಿಗಳಾಗಲು ಸಾಧ್ಯವಿದೆ.

**ಆನೆ:**

ಕಥೆಯಲ್ಲಿ ಒಬ್ಬ ರಾಜ ಆನೆಯಾಗಿ ಪರಿವರ್ತನೆಗೊಂಡು ಆ ಆನೆ ನಡೆಸುವ ಅವಗಡಗಳನ್ನು ಚಿತ್ರಿಸಲಾಗಿದೆ. ಡಾ. ಕರೀಗೌಡರು ಕೇಲವು ಪ್ರಯೋಗಗಳನ್ನು ಮಾಡಿದ್ದಾರೆ. ಪ್ರಮುಖವಾಗಿ ಎರಡು ಕಥೆಗಳಲ್ಲಿ ಪ್ರಯೋಗ ಮಾಡಿದ್ದಾರೆ. ಗುಬ್ಬಚ್ಚಿಗಳು ಮತ್ತು ಆನೆ. 'ಗುಬ್ಬಚ್ಚಿಗಳು' ಕಥೆಯಲ್ಲಿ ಗಂಡ–ಹೆಂಡತಿ ದಾಂಪತ್ಯದಲ್ಲಿ ಕಾಣಿಸುವ ಸರಸ–ವಿರಸಗಳನ್ನು ಗುಬ್ಬಚ್ಚಿಗಳ ಭಾವನೆಗಳನ್ನು ಮನುಷ್ಯ ಜೀವನಕ್ಕೆ ಅಳವಡಿಸಿ ಗಂಡ–ಹೆಂಡತಿಯರ ಜೀವನವನ್ನು ಕಟ್ಟಿಕೊಟ್ಟಿದ್ದಾರೆ. ಇದೇ ಕಥೆಯಂತೆ 'ಆನೆ' ಕಥೆಯಲ್ಲೂ ಸಹ ಕಥೆಗಾರರು ತನ್ನ ಸಹಮತ ತೊರ್ಪಡಿಸಿದ್ದಾರೆ. ಕಥೆಯಲ್ಲಿ ಆನೆಯು ಮೊದಲು ಒಬ್ಬ ಮನುಷ್ಯನಾಗಿರುತ್ತದೆ. ಆತನು

ಭಾರತದ ಪರಿಯಾಯ ಹೆಸರನ್ನೊಳಗೊಂಡು ಜಂಬೂ ದೀಪದ ರಾಜನಾಗಿರುತ್ತಾನೆ. ನಂತರ ಮುಪ್ಪಿನ ಕಾಲದಲ್ಲಿ ಪರಿವರ್ತನೆಯಾಗುತ್ತಾನೆ. ಕಥೆಯ 'ಆಧುನಿಕತೆ'; ವೈಚಾರಿಕತೆ, ಬದಲಾವಣೆ, ಪರಿವರ್ತನೆ, ಸಂವೇದನೆ ಮುಂತಾದ ಅಂಶಗಳನ್ನು ಪ್ರತಿಬಿಂಬಿಸುತ್ತದೆ. ರಾಜನು ಮುಪ್ಪಿನ ಅವಸ್ಥೆಯಲ್ಲಿ ಒಂದು ದಿನ ರಾತ್ರಿ ಬಿದ್ದ ಕನಸಿನಿಂದ ಮೇಲೆಳಲಾಗುವುದಿಲ್ಲ, "ಕೂತರೆ ನಿಲ್ಲಲು ಆಗುತ್ತಿಲ್ಲ ಮಲಗಿದರೆ ಏಳಲು ಆಗುತ್ತಿಲ್ಲ. ಎದ್ದರೆ ಮಲಗಲು ಆಗುತ್ತಿಲ್ಲ; ಶರೀರ ಹುಟ್ಟು ಸಾವುಗಳ ನಡುವೆ ಗುದ್ದಾಡುತ್ತಿತ್ತು"* ಹೀಗಾಗಿದ್ದಕ್ಕಾಗಿ ಆಸ್ಪತ್ರೆಗೆ ಕರೆದೊಯ್ಯಿದರು. ಅಲ್ಲಿ ಆನೆಯಾಗಿ ಪರಿವರ್ತನೆಯಾಗುತ್ತಾನೆ. ಇಲ್ಲಿ ಪರಿವರ್ತನೆಯ ಹಾದಿಯಲ್ಲಿ ಕಥೆಗಾರರು ಆಧುನಿಕತೆ ಅಂದರೆ ಆಸ್ಪತ್ರೆ, ವಿಮಾನ ಮುಂತಾದ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ಕೊನೆಯಲ್ಲಿ ರೈತನ ಜೀವನಕ್ಕೆ ಆಸರೆಯಾಗಿ ನೇಗಿಲಿಗೆ ಬೆನ್ನುಕೊಟ್ಟು ಆತನ ಜೀವಕ್ಕೆ ಒಂದು ನೆಲೆಯಾಗಿ ನಿಲ್ಲುವುದು ಕಥೆಗೆ ಶಕ್ತಿಯನ್ನು ಕೊಡುವುದರ ಮೂಲಕ ತನ್ನ ನೈತಿಕತೆಯನ್ನು ಗುರುತಿಸಿಕೊಳ್ಳುತ್ತದೆ. ವಾಸ್ತವಿಕ ಜಗತ್ತಿನಲ್ಲಿ ಈ ರೀತಿಯಲ್ಲಾಗುವುದು ಸಾಧ್ಯವಿಲ್ಲದ ಮಾತು ಎಂದೆನಿಸುತ್ತದೆ.

**ಹಂದಿಲಕ್ಕವ್ವ:**

ಈ ಕಥೆಯಲ್ಲಿ, ಹಳ್ಳಿ ಬದುಕಿನ ಒಳಗೆ ಮನುಷ್ಯ ಸಂಬಂಧಗಳು ಅವು ಊರೊಟ್ಟಿಗಿನವು ಇರಬಹುದು, ಕಳ್ಳಬಳ್ಳಿಯವು ಇರಬಹುದು ಸಂಕೀರ್ಣವಾಗಿರುತ್ತವೆ! ಪ್ರೀತಿ, ದ್ವೇಷ ಒಂದರೊಳಗೊಂದು ಹಾಸುಹೊಕ್ಕಾಗಿರುವ ನೈಜ ಕಥೆಯಲ್ಲಿ ನಿರೂಪಿಸಲಾಗಿದೆ. ಕಥೆಗಾರರಿಗೆ ಗ್ರಾಮೀಣ ಜೀವನ ವಿಧಾನದ ಲಯವನ್ನು ಗಾಢವಾಗಿ ಅನುಭವಿಸಿ ಬರೆಯಬಲ್ಲವರಾಗಿದ್ದಾರೆ. ಸಹಜ ಬದುಕಿನ ಸಂಸ್ಕೃತಿಯನ್ನು ವಾಸ್ತವ ಮಾರ್ಗದಲ್ಲಿ ನಿರೂಪಿಸಿದ್ದಾರೆ. ಇದೇ ಸಹಜ ಬದುಕಿನ ಸಂಸ್ಕೃತಿಯನ್ನು ಆಧಾರವಾಗಿ ಇಟ್ಟುಕೊಂಡು, ಕಥೆಗಾರರು ತಮ್ಮ ಬೌದ್ಧಿಕತೆಯನ್ನು, ವೈಚಾರಿಕತೆಯನ್ನು ಕಥೆಯ ಒಳವೊಳಗೆ ತುಂಬಲು ಪ್ರಯತ್ನಿಸಿ ಸಫಲರಾಗಿದ್ದಾರೆ.

ಬೀಚನಹಳ್ಳಿ ಅವರು ಒಂದೆ ಕುಟುಂಬದಲ್ಲಿ ವಿವಿಧ ರೀತಿಯ ಮನಸ್ಸುಗಳಿರುವುದನ್ನು 'ಅವಮಾನ' ಕಥೆಯಲ್ಲಿ ಅತ್ಯಂತ ಸರಾಗವಾಗಿ ಬಿಚ್ಚಿಟ್ಟಿದ್ದಾರೆ. ಇದಕ್ಕಿಂತ ಹಿಂದೆ 'ಆಸಕ್ತಿ' ಕಥೆಯಲ್ಲಿಯೂ ಸಹ ಗುರುತಿಸಲಾಗಿದೆ. ಇವುಗಳ ಸಾಲಿಗೆ ಸೇರುವಂತದ್ದು 'ಹಂದಿಲಕ್ಕವ್ವ' ಕಥೆ. ಈ ಕಥೆಯಲ್ಲಿ ಬರುವ ಕಾಡಣ್ಣ, ಗಂಗಮ್ಮ, ಗೌರಮ್ಮ, ಶಾರದ, ಗೋವಿಂದ, ಕೃಷ್ಣ ಇವರೆಲ್ಲರದ್ದು ಒಂದು ಕುಟುಂಬವಾಗಿದೆ. ಹಳೆವೂರಿನ ಪಾಳು ದೇವಾಲಯದ ಹಳೆ ಮಂಟಪವೇ ಅರಮನೆ ಎಂದು ಸಂಸಾರ ನಡೆಸುತ್ತಿದ್ದ ಭೀಮಣ್ಣ ಮತ್ತು ಈತನ ಹೆಂಡತಿ ಲಕ್ಕವ್ವ ಇವರದೊಂದು ಕುಟುಂಬ. ಇವರು ಕೊರಚ-ಕೊರಮ ಜಾತಿಗೆ ಸೇರಿದವರಾಗಿದ್ದಾರೆ. ಭೀಮಣ್ಣ-ಹಂದಿಗಳನ್ನು ಸಾಕುವುದು, ಲಕ್ಕವ್ವ ದಿನಾಲು ಬಳೆ ಬಿಚ್ಚೋಲೆ, ಬೀಸಣಿಕೆ, ಕನ್ನಡಿ, ಟೇಪು ಮುಂತಾದವುಗಳನ್ನು ವ್ಯಾಪಾರಮಾಡುತ್ತಿದ್ದಳು. ಒಂದು ದಿನ ಇವರಿದ್ದ ದೇವಸ್ಥಾನದಲ್ಲಿ ಕಳ್ಳತನವಾಯಿತು. ಅದು ಭೀಮಣ್ಣನ ಮೇಲೆ ಬಂದು ಆತನನ್ನು ಜೈಲಿಗೆ ಹಾಕಿದ್ದರು. ಅಂದಿನಿಂದ ಲಕ್ಕವ್ವ ತನ್ನ ಕೆಲಸ ಬಿಟ್ಟು ಭೀಮಣ್ಣನ ಕೆಲಸ ತಾ ಮಾಡುತ್ತಿದ್ದಳು. ಅಂದಿನಿಂದ ಆಕೆಯನ್ನು 'ಹಂದಿಲಕ್ಕವ್ವ' ಎಂದು ಕರೆಯುವುದು ರೂಢಿಯಾಗಿತ್ತು. ಬೀಚನಹಳ್ಳಿ ಅವರು

ಒಂದು ಜನಾಂಗದವರನ್ನು ಗುರುತಿಸಿ ಅವರನ್ನು ತಮ್ಮ ಕಥೆಯ ಪಾತ್ರದಾರಿಗಳನ್ನಾಗಿ ಮಾಡಿಕೊಂಡು ಅವರ ಉದ್ಯೋಗವನ್ನು ಸಹ ತಿಳಿಸಿದ್ದಾರೆ. ಇಂದಿಗೂ ಸಹ ಕೊರಚ-ಕೊರಮ ಜನಾಂಗದವರು ಇದ್ದಾರೆ. ಬೀಚನಹಳ್ಳಿ ಅವರು ತಿಳಿಸಿದುದ್ಯೋಗವನ್ನು ಮಾಡುತ್ತಿದ್ದಾರೆ. ಇಂದಿನ ನಗರ ಪ್ರದೇಶಗಳಲಿ ಹಂದಿಗಳನ್ನು ಸಾಕುತ್ತಿರುವವರು ಕೊರಚ ಜನಾಂದವರೇ ಆಗಿದ್ದಾರೆ. ಇವರು ಇತ್ತೀಚೆಗೆ ಆರ್ಥಿಕವಾಗಿ ರಾಜಕೀಯವಾಗಿ ಪ್ರಬಲರಾಗಿದ್ದಾರೆ.

'ಕಾಡಣ್ಣ'ನಿಗೆ ಇಬ್ಬರು ಹೆಂಡತಿಯರು ಇವರು ಬೇರೆ-ಬೇರೆ ಆಗಿದ್ದರು. ಆದರೆ 'ಕಾಡಣ್ಣ' 'ಹಂದಿಲಕ್ಕವ್ವ'ನನ್ನು ಮನೆಗೆ ಕರೆದುಕೊಂಡು ಬಂದಾಗ ಒಡೆದ ಮನಸ್ಸುಗಳು ಒಂದಾಗುತ್ತವೆ. ಎರಡು ಸಂಸಾರ ಒಂದಾಗಲು ಪ್ರಯತ್ನಿಸುತ್ತದೆ. ಇವರಲ್ಲಿ ಸ್ವಾಭಿಮಾನ ಎಂಬುದು ಇವರಲ್ಲಿ ಕಾಡುತ್ತಿರುತ್ತದೆ. ಆದ್ದರಿಂದ ಮನೆಯಿಂದ ಹಂದಿಲಕ್ಕವನನ್ನು ಹೊರಹಾಕುವ ಪ್ರಯತ್ನ ಮಾಡುತ್ತಾರೆ ಆದರೆ ಇದನ್ನು ಅರ್ಥಮಾಡಿಕೊಂಡ ಲಕ್ಕವ್ವ ಅವರು ಹೇಳುವುದಕ್ಕಿಂತ ಮುಂಚೆಯೇ ಮನೆಬಿಟ್ಟು ಹೋಗುತ್ತಾಳೆ ಆದರೆ ಇಲ್ಲಿ ಕಾಡಣ್ಣನ ಹೃದಯ ಬಿಚ್ಚುಮನಸ್ಸಿನದು, ಈತನಿಗೆ ಜಾತಿ ಬೇದವಿರುವುದಿಲ್ಲ. ಕಾಡಣ್ಣ ಭಾವನೆ ಸಮಾಜದ ಜನತೆಗೆ ಬರಬೇಕು. ಕಥೆ ಮಾನವೀಯತೆಯತ್ತ ನೋಡುವಂತದ್ದಾಗಿದೆ. ಎಲ್ಲರೂ ಒಂದೆ ಎಂಬ ಭಾವನೆಯನ್ನು ಬಿತ್ತರಿಸುವುದು ಕಥೆಗಾರರ ಸದುದ್ದೇಶವಾಗಿದೆ. ಕಥೆಯು ಗ್ರಾಮೀಣತೆಯಲ್ಲಿರುವ ವಿಭಿನ್ನ ರೀತಿಯ ಸಂಬಂಧಗಳನ್ನು ಪರಿಚಯಿಸುತ್ತ ಸಾಗಿದೆ.

**ಹಕ್ಕಿ ಬೆಂದೊ ಹಕ್ಕಿಮರಿ ಬೆಂದೊ:**

ಕಥೆಯ ವಸ್ತು, ಕೈಗಾರಿಕೆ-ಗಣಿಗಾರಿಕೆಯಿಂದ ಜನಸಮೂದಾಯಗಳ ಮೇಲೆ ಉಂಟಾಗುವ ಪರಿಣಾಮಗಳನ್ನು ಹೇಳುತ್ತದೆ. ಗಣಿಗಾರಿಕೆಯಿಂದ ಯಾರಿಗೆ ಲಾಭ? ಯಾರಿಗೆ ನಷ್ಟ? ಎಂಬುದನ್ನು ಸೂಚಿಸುತ್ತದೆ. ಯಾವ ಡಿಬಿಟ್ ಇಲ್ಲದೆ ನಿರೂಪಣೆಗೊಳ್ಳುವ ಈ ಕಥೆಯಲ್ಲಿ, ಮನುಷ್ಯ ಸಮುದಾಯಗಳು ಬದುಕುವ ಪರಿಸರದಲ್ಲಿ, ಪರಿಸರವೇ ಅಧೋಗತಿಗೆ ತಲುಪಿದೆ. ಬದುಕಲು ಸಾಧ್ಯವಿಲ್ಲವೆಂಬ ಹಂತ ತಲುಪಿದ ಪರಿಸರದಲ್ಲಿ ಯಾವ ಪ್ರಶ್ನೆಗಳು, ವಿರೋಧಗಳು, ಪ್ರತಿಭಟನೆಗಳು ಜನಸಮುದಾಯಗಳಿಂದ ಇಲ್ಲದಿದ್ದರೆ ಹೇಗೆ? ನಮ್ಮ ಪಾಲು ಎಷ್ಟು? ಪರಿಸರ ಮಾಲಿನ್ಯದ ವಿರುದ್ಧ ನಡೆಯುವ ಹೋರಾಟಗಳಲ್ಲಿ ಪಾಲ್ಗೊಳ್ಳುವುದೊಂದೆ ಪರಿಹಾರದ ಮಾರ್ಗ ಎಂಬ ಸಂದೇಶ ಈ ಕಥೆಯಲ್ಲಿದೆ. ಈ ಕಥೆಗಾರರ ಆಶಯ ಸರಿ, ಕಥೆಯಾಗಿ ಈ ಕಥೆಯನ್ನು ಗಮನಿಸುವುದು ಮುಖ್ಯವಾಗಿದೆ. ಕಥೆಗಾರರ ಈ ಬಗೆಯ ವಿಚಾರದ ನೆಲೆಯಲ್ಲಿ ಕಥೆ ನಿರೂಪಣೆಯಾಗಿದೆ. ಅನುಭವವಾಗಿ ಸೃಷ್ಟಿಸಿಕೊಂಡಿಲ್ಲ. ತತ್ವವೊಂದು ಕಥೆಯಲ್ಲಿ ನಿರೂಪಗೊಳ್ಳುವಾಗ, ಅದು ಬದುಕಿನ ಒಳಗೆ ಕರಗಿ, ಬದುಕಿನ ಲಯದಲ್ಲಿ ವ್ಯಕ್ತವಾಗಬೇಕು. ಇದು ಇಲ್ಲಿ ಸಾಧ್ಯವಾಗಿಲ್ಲ ಈ ಕಥೆಗಾರರು ಈ ಸವಾಲನ್ನು ಬಿಕ್ಕಟ್ಟನ್ನು ಎದುರಿಸಿ ಬಗೆಹರಿಸಿಕೊಳ್ಳಬೇಕಾಗಿದೆ. ಎಂದು ತೋರುತ್ತದೆ. ಈ ಕಥೆಯಲ್ಲಿನ ಪಾತ್ರಗಳು ಸಂಭಾಷಣೆಗಳು, ಘಟನೆ, ಸನ್ನಿವೇಶಗಳು ಸ್ಪಷ್ಟವಾಗಿಲ್ಲ. ನಿರೂಪಕ ಇದ್ದಾನೆ ಅವನ ವಿಚಾರಗಳು ಅವನ ಗ್ರಹಿಕೆಗಳು ಸ್ವಗತದ ರೀತಿಯಲ್ಲಿ ವ್ಯಕ್ತವಾಗಿದೆ. ಕಥೆ ಎಂದು ಅನಿಸಬಹುದು ಆದರೆ

ಕಥೆಯಾಗಿ ರೂಪಗೊಂಡಿಲ್ಲ ಅನಿಸುತ್ತದೆ. ಅಂದರೆ ಜಾಗತೀಕರಣ, ಖಾಸಗೀಕರಣ, ಉದಾರೀಕರಣ, ಕೋಮುವಾದ, ಭಯೋತ್ಪಾದನೆ, ಗಣಿಗಾರಿಕೆ, ನಕ್ಸಲ್ ಸಮಸ್ಯೆ ಮುಂತಾದವುಗಳು ಸಮಾಜದ ಮೇಲೆ ಉಂಟುಮಾಡುವ ಪರಿಣಾಮಗಳನ್ನು ಯೋಚಿದಬಹುದು. ಚಿಂತನಾತ್ಮಕ ಲೇಖನಗಳನ್ನು ಬರೆಯಬಹುದು. ಸಮಕಾಲೀನ ಸಂಗತಿಗಳನ್ನು ಮಾಡುವುದು ಕಥೆಗಾರರಿಗೆ ಸವಾಲನ್ನು ಒಡ್ಡುತ್ತದೆ. ಇವುಗಳಿಂದ ಉಂಟಾಗುವ ಪರಿಣಾಮಗಳನ್ನು ಸ್ಥಳೀಯ ನೆಲೆಯಲ್ಲಿ ಗ್ರಹಿಸಬೇಕು. ಅದನ್ನು ಮನುಷ್ಯ ಬದುಕಿನಲ್ಲಿ ಕಾಣಿಸಿ ಚಿತ್ರಿಸಬೇಕು ಎಂದು ಕಾಣುತ್ತದೆ.

ಡಾ. ಕರೀಗೌಡರು ಒಟ್ಟಾರೆಯಾಗಿ ತಮ್ಮ ಕಥೆಗಳಿಗೆ ಖಚಿತ ವಿನ್ಯಾಸವೊಂದನ್ನು ಕಂಡುಕೊಂಡಿದ್ದಾರೆ. ಈ ವಿನ್ಯಾಸ ಕಥೆಗಳ ಹೂರಣವೂ ಹೌದು. ಅದನ್ನು ಅಣಿ ಮಾಡಿ, ಜೋಡಿಸಿ ಓದುಗರಿಗೆ ತಲುಪಿಸುವ ಕ್ರಮದ್ದೂ ಹೌದು. ಕನ್ನಡದ ಅತ್ಯುತ್ತಮ ಸಣ್ಣ ಕಥೆಗಳು 'ದೇಸಿ' ಕಥೆಗಳೇ ಆಗಿವೆ. ನಮ್ಮ ನಾಡಿನ ಒಂದೊಂದು ನಿರ್ದಿಷ್ಟ ಪ್ರದೇಶದ ಬದುಕನ್ನು ಅಥವಾ ನಿರ್ದಿಷ್ಟ ಜಾತಿಯ ಜನರ ಬದುಕಿನ ಕ್ರಮಗಳನ್ನು ನಿಕಟವಾಗಿ ಆತ್ಮೀಯವಾಗಿ ಮತ್ತು ವಿಮರ್ಶಾತ್ಮಕವಾಗಿ ಮೂಲ ಸಾಮಗ್ರಿಯಂತೆ ಬಳಸಿಕೊಂಡ ಲೇಖಕರು ಮಾತ್ರ ಅತ್ಯುತ್ತಮ ಕತೆಗಳನ್ನು ಬರೆದಿದ್ದಾರೆ. ಅಸಂಖ್ಯಾತ ಜನಪ್ರಿಯ ಕತೆಗಳು ನಮ್ಮ ನಾಡಿನ ಯಾವ ಪ್ರದೇಶವನ್ನು ಯಾವ ಜಾತಿಯನ್ನೂ, ಯಾವ ಸಾಮಾಜಿಕ ವರ್ಗವನ್ನು ನಿಜವೆನ್ನುವಂತೆ ಚಿತ್ರಿಸುವುದೇ ಇಲ್ಲ. ಕುಣಿಗಲ್ ತಾಲೂಕಿನ ಸುತ್ತಮುತ್ತಲ ಸುಮಾರು ೩೦–೫೦ ಮೈಲಿನ ಪ್ರದೇಶ ಅವರ ಕತೆಗಳು ನಡೆಯುವ 'ದೇಶ' ಈ 'ದೇಶ' ಬೆಂಗಳೂರಿನಂಥ ನಗರಕ್ಕೆ ಹತ್ತಿರದಲ್ಲಿದ್ದೂ ತನ್ನ ಹಳ್ಳಿತನವನ್ನು ಪೂರ್ಣವಾಗಿ ಕಳೆದುಕೊಂಡಿದಿದ್ದ ಕಾಲದಲ್ಲಿ, ಈ ಶತಮಾನದಲ್ಲಿ ಇಲ್ಲಿನ ಬಹಳಷ್ಟು ಕತೆಗಳು ಮುಖ್ಯ ವಸ್ತುಗಳೇ ಹೌದು. ಆದರೆ ಇವತ್ತಿನ ಕತೆಗಾರರ ಮುಖ್ಯ ಅಂಶ ಅಲ್ಲವೇ ಅಲ್ಲ. ಹಳ್ಳಿಯೇ ಅವರ ಕತೆಗಳ ದೇಶ. ನಗರದಲ್ಲಿ ಕತೆ ಆರಂಭವಾದರೂ, ಅನೇಕ ಪಾತ್ರಗಳು ನಗರದಲ್ಲಿ ನೆಲಸಿದವಾದರೂ ಕತೆ ತೊಡಗಿದ ಸ್ವಲ್ಪ ಹೊತ್ತಿನಲ್ಲೆ ಹಳ್ಳಿಯ ಬದುಕು ಮುನ್ನಲೆಗೆ ಬಂದುಬಿಡುತ್ತದೆ. ಪಾತ್ರಗಳಿಗೆ ಹಳ್ಳಿಯಲ್ಲಿರುವ ಸಂಬಂಧಿಕರು ಒಡ್ಡುವ ತೊಡಕುಗಳು ಮುಖ್ಯವಾಗಿ ಬಿಡುತ್ತವೆ. ಹಳ್ಳಿಗೆ ಪ್ರವೇಶಿಸುವ ನಗರ ಕನ್ನಡ ಸಣ್ಣಕತೆಯ ಒಂದು ಮುಖ್ಯಧೀರ, ಹಾಗೆಯೇ ನಗರದೊಳಗಿನ ಹಳ್ಳಿ ನಮ್ಮ ವಿಮರ್ಶಕರು ಹೆಚ್ಚು ಗಮನಿಸಿದ ಸಂಗತಿ. ಕರೀಗೌಡರ ಕತೆಗಳಲ್ಲಿ ಪಾತ್ರಗಳು ನಗರದೊಳಗಿದ್ದರೂ ಅವುಗಳ ಮನಸ್ಸಿನ ತುಂಬ ಹಳ್ಳಿ ಬದುಕನ್ನೆ ತುಂಬಿಕೊಂಡಿವೆ.

# ಅಡಿ ಟಿಪ್ಪಣಿಗಳು

**ಬೀಚನಹಳ್ಳಿಯವರ ಎಲ್ಲ ಕಥೆಗಳು**

# ಅಧ್ಯಾಯ ಐದು
# ಅಧ್ಯಯನದ ಫಲಿತಗಳು

ಡಾ. ಕರೀಗೌಡ ಬೀಚನಹಳ್ಳಿಯವರು ಕನ್ನಡ ಕಥಾ ಪರಂಪರೆಯಲ್ಲಿ ತಮ್ಮದೆ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದ್ದಾರೆ ಬೀಚನಹಳ್ಳಿಯವರು ನವ್ಯ ಕಾಲದಘಟ್ಟದ ಕಥೆಗಳನ್ನು ಅಭ್ಯಾಸಿಸಿದವರು. ನವ್ಯ ಪಂಥದ ಕಥೆಗಳಂತೆ ಬರೆಯದೆ, ದಲಿತ ಬಂಡಾಯದ ಕಥೆಗಳಿಗೆ ಒಗ್ಗಿಕೊಳ್ಳದೇ ತಮ್ಮದೇ ಆದ ವಿಶಿಷ್ಟತೆಯನ್ನಿಟ್ಟುಕೊಂಡು ಕಥೆಗಳನ್ನು ರಚಿಸಿದ್ದಾರೆ. ಇವರು ಸಮಾರು ೨೫ ವರ್ಷಗಳಲ್ಲಿ ೩೮ ಕಥೆಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಪ್ರಸ್ತುತ ನಿಬಂಧವು ಅವರ ಎಲ್ಲಾ ಕಥೆಗಳನ್ನು ಒಳಗೊಂಡಿದೆ. "ಗ್ರಾಮ ಸಮಾಜದ ಸ್ವರೂಪ" ಎಂಬ ಶೀರ್ಷಿಕೆಯಡಿಯಲ್ಲಿ ತಯಾರಿಸಿದ ಈ ನಿಬಂಧದಿಂದ ಕೆಲವು ಫಲಿತಗಳನ್ನು ಗುರುತಿಸಲಾಗಿದೆ.

೧. ನಮ್ಮ ನಾಡಿನ ಒಂದೊಂದು ನಿರ್ದಿಷ್ಟ ಪ್ರದೇಶದ ಬದುಕನ್ನು ಅಥವಾ ನಿರ್ದಿಷ್ಟ ಜಾತಿಯ ಜನರ ಬದುಕಿನ ಕ್ರಮಗಳನ್ನು ನಿಕಟವಾಗಿ, ಆತ್ಮೀಯವಾಗಿ ಮತ್ತು ವಿಮರ್ಶಕವಾಗಿ ಕಥೆಗಳಲ್ಲಿ ತಿಳಿಸಿಕೊಟ್ಟಿದ್ದಾರೆ.

೨. ಬೀಚನಹಳ್ಳಿಯವರ ಕಥೆಗಳಲ್ಲಿ ಗಂಭೀರ ಚಿಂತನೆ ಮತ್ತು ಅಚಲವಾದ ಆಸಕ್ತಿ ಬರುವುದು

೩. ಹಳ್ಳಿಯೇ ಅವರ ಕಥೆಗಳ ದೇಶ, ನಗರದಲ್ಲಿ ಕಥೆ ಆರಂಭವಾದರೂ ಅನೇಕ ಪಾತ್ರಗಳು ನಗರದಲ್ಲಿ ನೆಲೆಸಿದರೂ ಕಥೆ ತೊಡಗಿದ ಸ್ವಲ್ಪ ಹೊತ್ತಿನಲ್ಲೇ ಹಳ್ಳಿಯ ಬದುಕು ಮುನ್ನೆಲೆಗೆ ಬಂದು ಬಿಡುತ್ತವೆ.

೪. ಶಿಕ್ಷಣದಿಂದ ಮಾತ್ರ ಹಳ್ಳಿಯ ಬದುಕಿನ ದುರ್ಭರತೆ ಇಲ್ಲವಾಗಲು ಸಾಧ್ಯ; ಮಕ್ಕಳು ತಮ್ಮ ಹಿರಿಯರಿಗಿಂತ ಉತ್ತಮ ಬದುಕನ್ನು ಕಾಣಬಲ್ಲರು. ತಾಯ್ತನವುಳ್ಳ ಹೆಣ್ಣು ಮಾತ್ರ ಕುಟುಂಬದ ಸೌಖ್ಯ ಮತ್ತು ತನ್ನ ಸುತ್ತಲ ಬದುಕಿನ ಕ್ಷೇಮವನ್ನು ಕಾಪಾಡ ಬಲ್ಲಳು ವರ್ತಮಾನ ಎಷ್ಟೇ ಕಟುವಾಗಿ, ಕಹಿಯಾಗಿದ್ದರು ಭವಿಷ್ಯ ಉತ್ತಮವಾಗಬಲ್ಲದು. ಸಹಿಸಿಕೊಳ್ಳುವುದು ಮತ್ತು ಹೊಂದಿಕೊಳ್ಳುವುದು ನಿಜವಾದ ಮೌಲ್ಯಗಳು ಎಂಬ ಸಂಗತಿಗಳು ಕರೀಗೌಡರ ಎಲ್ಲಾ ಕಥೆಗಳಲ್ಲೂ ಮತ್ತೆ ಮತ್ತೆ ಬೇರೆ ಬೇರೆ ಸಂದರ್ಭದಲ್ಲಿ ವ್ಯಕ್ತಗೊಳ್ಳುತ್ತವೆ.

೫. ಮಕ್ಕಳು ದೊಡ್ಡವರಿಗೆ ಅವರ ದೊಡ್ಡ ಸಮಸ್ಯೆಗಳ ಎದುರಿನಲ್ಲಿ ತಮ್ಮ ಪುಸ್ತಕ, ಪೆನ್ನು, ಹಾಳೆಗಳು ಕ್ಷುದ್ರವಾಗಿ ಕಂಡು ಅದರಿಂದ ಕಂಗಾಲಾದ ಮಕ್ಕಳು ಮರದ ಕೆಳಗೋ, ಜಗಲಿಯ ಮೇಲೋ ಶಾಲೆ ಎಲ್ಲೇ ನಡೆಯಲಿ ಶಿಕ್ಷಣದಿಂದ ತಮ್ಮೆದುರು ತೆರೆದುಕೊಳ್ಳುವ ಹೊಸ ಜಗತ್ತನ್ನು ಪ್ರವೇಶಿಸಲು ಕಾತರಗೊಂಡಿರುವ ಮಕ್ಕಳ ಚಿತ್ರಗಳು ಕಥೆಗಳಲ್ಲಿ ಮೂಡಿಬಂದಿವೆ.

೬. ಕಥೆ ಹಾಗೂ ಕಥಾ ಸಾಹಿತ್ಯದ ಪರಂಪರೆಯಲ್ಲಿ, ಪರಿಕಲ್ಪನೆಗಳಲ್ಲಿ ವಿನಯ ಪೂರ್ಣವಾದ ಕಾಳಜಿಯಿರುವುದನ್ನು ಕಾಣಬಹುದು.

೭. ಪರಂಪರೆ, ಸಂಪ್ರದಾಯ, ವಸ್ತುನಿಷ್ಠತೆ ಮತ್ತು ವ್ಯಕ್ತಿನಿಷ್ಠತೆಗೆ ಒತ್ತು ನೀಡಿರುವುದನ್ನು ಕಥೆಗಳಲ್ಲಿ ಕಟ್ಟಿಕೊಟ್ಟಿದ್ದಾರೆ.

೮. ಹಳ್ಳಿ ಶಾಲೆಯನ್ನು ಕೇಂದ್ರವಾಗಿಟ್ಟುಕೊಂಡು ಈ ಶತಮಾನದ ಗ್ರಾಮೀಣ ಬದುಕಿನ ವಿವಿಧ ಮುಖಗಳನ್ನು ಪರಿಶೀಲಿಸುವ ಆಕಾಂಕ್ಷೆಯನ್ನು ಇಲ್ಲಿಯ ಕಥೆಗಳು ಪ್ರತಿಬಿಂಬಿಸುತ್ತವೆ.

೯. ಕರೀಗೌಡರ ಇನ್ನೊಂದು ವೈಶಿಷ್ಟ್ಯವೆಂದರೆ ಅವರು ಹೆಣ್ಣು ಪಾತ್ರಗಳನ್ನು ಕಂಡಿರಿಸಿರುವ ಕಥೆಗಳಲ್ಲಿ ಹೆಣ್ಣಿನ ತಾಯ್ತನದ ವಿವಿಧ ಮುಖಗಳು ಮೈ ತುಂಬಿದಂತೆ

೧೦. ಇಲ್ಲಿನ ಕಥೆಗಳಲ್ಲಿ ಬರುವ ಬಹುತೇಕ ಪಾತ್ರಗಳು ರಣರಣ ಸುಡುವ ಕಾಲು ಹಾದಿಯ ಪಯನಿಗರು ಸ್ವಚ್ಛ ತಿಳಿಯ ಆಕಾಶದಂತ ಬದುಕು ಭವಿಷ್ಯದಲ್ಲಿ ತಮ್ಮದಾದಿತೆಂಬ ಆಸೆಯಲ್ಲಿ ನಿತ್ಯದ ಜಂಜಾಟಗಳನ್ನು ಸಹಿಸಿಕೊಳ್ಳುವರು. ಭಯ, ಸಂಕೋಚ, ವಿಧೇಯತೆ ತುಂಬಿಕೊಂಡ ಹೃದಯಗಳ ಜನರು ಬದುಕುವ ಛಲವನ್ನು ದಾಖಲಿಸುತ್ತಾರೆ.

೧೧. ಇಲ್ಲಿನ ಕಥೆಗಳಲ್ಲಿ ಕಣ್ಣಿಗೆ ಕಾಣುವ ಕ್ರಿಯೆಗಳ ನಿರೂಪಣೆಗೆ ಸಿಗುವಷ್ಟು ಪ್ರಾಮುಖ್ಯ ಪಾತ್ರಗಳ ಭಾವಲೋಕಕ್ಕೆ ಸಿಗುವುದಿಲ್ಲ ಎನಿಸುತ್ತದೆ. ಇಲ್ಲಿ ಎಲ್ಲವೂ ಮೂರ್ತವೇ ಹೊರತು ಅಮೂರ್ತತಗೆ ಅವಕಾಶವಿಲ್ಲ. ಅದಕ್ಕೆಂದೇ ಈ ಕಥೆಗಳಲ್ಲಿ ಸಂಘರ್ಷನಕ್ಕೆ ಕಾರಣವಾಗುವ ಸಂಗತಿಗಳು ನೆಲ, ಮನೆ, ಆಸ್ತಿ, ಕುರಿ, ಕೋಳಿಗಳ ಒಡೆತನದ ಪ್ರಶ್ನೆ ಇಂಥವಕ್ಕೆ ಸಂಬಂಧ ಪಟ್ಟವೇ ಆಗಿವೆ. ಒಡೆತನ ಮತ್ತು ರಕ್ತಸಂಬಂಧದ ಮೋಹಗಳು ಹೀಗೆ ಈ ಕಥೆಗಳ ಪ್ರಮುಖ ಬಿತ್ತಿಯಾಗಿದೆ.

೧೨. ಗ್ರಾಮೀಣ ನೆಲೆಗಳಲ್ಲಿ ದಕ್ಕಿದ ಅನುಭವಗಳಲ್ಲಿ ಮೊದಲ ಹಂತದಲ್ಲಿ ಮುಗ್ಧತೆ ಕಂಡರೆ, ಎರಡನೇ ಹಂತದಲ್ಲಿ ವೈಚಾರಿಕತೆ ಕಂಡರೆ, ಮೂರನೇ ಹಂತದಲ್ಲಿ ಮುಗ್ಧತೆ ಮತ್ತು ವೈಚಾರಿಕತೆಯನ್ನು ಮೀರಿದ ಸಾಮಾಜಿಕ ಕಾಳಜಿಯನ್ನು ಬಿಂಬಿಸುವ ನೆಲೆಗೆ ಕಥೆಗಾರರು ಬಂದು ನಿಂತಿದ್ದಾರೆ. ಸಾಮಾಜಿಕನ ನೈತಿಕತೆಯನ್ನು, ಸಾಮಾಜಿಕನ ಸ್ಥಾನವನ್ನು ಪ್ರಶ್ನಿಸಿ ಅದಕ್ಕೊಂದು ದಾರಿಯನ್ನು ತೋರಿಸುವ ಪ್ರಯತ್ನ ಮಾಡಿದ್ದಾರೆ.

ಹೀಗೆ ಈ ನಿಬಂಧದಿಂದ ಹತ್ತು ಹಲವು ಫಲಿತಗಳನ್ನು ಗುರುತಿಸಬಹುದಾಗಿದೆ. ಈ

ಮೇಲಿನ ಎಲ್ಲಾ ಫಲಿತಗಳು ಬೀಚನಹಳ್ಳಿ ಅವರ ಕಥೆಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಾಗ ಕಂಡು ಬಂದ ವೈಶಿಷ್ಟಗಳಾಗಿವೆ.

**ಅಧ್ಯಯನದ ಸಾಧ್ಯತೆಗಳು**

ಡಾ. ಕರೀಗೌಡ ಬೀಚನಹಳ್ಳಿ ಅವರು ರಚಿಸಿದ ಸಾಹಿತ್ಯ ಪ್ರಕಾರಗಳಲ್ಲಿ ಕಥಾ ಸಾಹಿತ್ಯವು ಒಂದು. ಇವರು ಗ್ರಾಮೀಣ ಅನುಭವಗಳನ್ನು, ನಗರದ ಜೀವನ ಚಿತ್ರಣವನ್ನು, ಬಡತನ, ಶಿಕ್ಷಣ, ಪ್ರಯೋಗಗಳು ಹೀಗೆ ಹಲವು ಅಂಶಗಳನ್ನಿಟ್ಟುಕೊಂಡು ರಚಿಸಿದ ಕಥೆಗಳು ಹಲವು ವಿಶಿಷ್ಟತೆಯಿಂದ ಕೂಡಿವೆ. ಇವರು ತಮ್ಮ ಬರಹದ ಸಂದರ್ಭದಲ್ಲಿ ಸುಮಾರು ೨೫ ವರ್ಷಗಳ ಕಾಲದಲ್ಲಿ '೩೮' ಕಥೆಗಳನ್ನು ರಚಿಸಿದ್ದಾರೆ. ಮುಂದೆಯೂ ಬರೆಯಬಹುದು. ಇವರ ಕಥೆಗಳಲ್ಲಿ ಕಂಡು ಬರುವ 'ಗ್ರಾಮೀಣ ಜನತೆಯ ಸ್ವರೂಪವನ್ನು' ನನ್ನ ಗ್ರಹಿಕೆಗೆ ಅನುಗುಣವಾಗಿ ಕಟ್ಟಿಕೊಡಲು ಪ್ರಯತ್ನಿಸಿದ್ದೇನೆ. ಇವರ ಕಥೆಗಳ ಮೇಲೆ ಮತ್ತಷ್ಟು ಅಧ್ಯಯನ ಮಾಡುವ ಸಾಧ್ಯತೆಗಳಿವೆ.

೧. ಬೀಚನಹಳ್ಳಿ ಅವರ ಕಥೆಗಳನ್ನಿಟ್ಟುಕೊಂಡು ಅವರ ವೈಚಾರಿಕ ಚಿಂತನೆ, ಆಲೋಚನೆಯ ವಿಧಾನಗಳು ಗುರುತಿಸುವ ಸಾಧ್ಯತೆಗಳಿವೆ.

೨. ಬೀಚನಹಳ್ಳಿಯವರು ಬೆಂಗಳೂರು ಸಮೀಪದ ಕೊಳ್ಳೆಗಾಲ ಪ್ರದೇಶಕ್ಕೆ ಸಂಬಂಧಿಸಿದವರಾಗಿದ್ದರಿಂದ ಅವರು ತಮ್ಮ ಕಥೆಗಳಲ್ಲಿ ಕಟ್ಟಿ ಕೊಟ್ಟಿರುವ ಭಾಷಾ ವೈಶಿಷ್ಟತೆಯನ್ನು ಗುರುತಿಸುವ ಸಾಧ್ಯತೆಯಿದೆ.

೩. ಇವರು ತಮ್ಮ ಬಾಲ್ಯದ ಅನುಭವಗಳನ್ನು ಕಥೆಯ ಮೂಲಕ ಕಟ್ಟಿ ಕೊಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಇದರಿಂದ ಇವರ ಸಾಮಾಜಿಕ ಹಾಗೂ ಸಾಂಸ್ಕೃತಿಕ ವೈಶಿಷ್ಟಗಳನ್ನು ಗುರುತಿಸುವ ಸಾಧ್ಯತೆಗಳಿವೆ.

೪. ಕರೀಗೌಡರು ಹೊಸ ತಲೆಮಾರಿನ ಕಥೆಗಾರರು ಎನಿಸಿಕೊಂಡಿದ್ದಾರೆ. ಇವರ ಕಥಾ ಸಾಹಿತ್ಯದ ಜೊತೆಗೆ ಇವರ ಇನ್ನಿತರ ಆಯಾಮಗಳನ್ನು ಹಾಗೂ ಅವರು ಇತ್ತೀಚೆಗೆ ಯಾವ ರೀತಿಯ ಕಥಾ ಪ್ರಕಾರಗಳನ್ನು ಬರೆಯುತ್ತಾರೆ ಎಂಬುದನ್ನು ಗುರುತಿಸುವ ಸಾಧ್ಯತೆಯಿದೆ.

೫. ಅವರು ರಚಿಸಿದ ಎಲ್ಲಾ ಸಾಹಿತ್ಯ ಪ್ರಕಾರಗಳನ್ನಿಟ್ಟುಕೊಂಡು ಸಂಶೋಧನೆ ಮಾಡುವ ಸಾಧ್ಯತೆಗಳಿವೆ.

೬. ಬೀಚನಹಳ್ಳಿ ಅವರ ಕಥೆಗಳಿಗೆ ಅಮರೇಶ ನುಗಡೋಣಿ, ಹೆಚ್. ನಾಗವೇಣಿ, ವಸುದೇಂದ್ರ, ಮುಗಳ್ಳಿ ಗಣೇಶ, ಶ್ರೀಕೃಷ್ಣ ಆಲನಹಳ್ಳಿ ಹೀಗೆ ಹೊಸ ತಲೆಮಾರಿನ ಕಥೆಗಾರರ ಕಥೆಗಳನ್ನಿಟ್ಟುಕೊಂಡು 'ತೌಲನಿಕ' ಅಧ್ಯಯನ ಮಾಡುವ ಸಾಧ್ಯತೆಗಳಿವೆ.

೭ ಬೀಚನಹಳ್ಳಿ ಅವರು ರಚಿಸಿದ ಇನ್ನಿತರ ಸಾಹಿತ್ಯ ಪ್ರಕಾರಗಳಲ್ಲಿ ನೋಡಿದ ಸಮಾಜಕ್ಕೂ ಕಥೆಗಳಲ್ಲಿ ಕಟ್ಟಿಕೊಟ್ಟಿರುವ ಗ್ರಾಮೀಣ ಸಮಾಜಕ್ಕೂ ವ್ಯತ್ಯಾಸವನ್ನು ಗುರುತಿಸುವ ಸಾಧ್ಯತೆಗಳಿವೆ.

# ಸಮಾರೋಪ

ಡಾ. ಕರೀಗೌಡ ಬೀಚನಹಳ್ಳಿ ಅವರ ಇದುವರೆಗಿನ ಕಥೆಗಳನ್ನು ಗಮನಿಸಿದಾಗ, ಅವು ಅವರ ಚಿಕ್ಕಂದಿನ ಕಾಲದ ಅವರ ಊರಿನ ಅನುಭವಗಳು ಕಥೆಗಳ ರೂಪದಲ್ಲಿ ನಿರೂಪಣೆಗೊಂಡಿವೆ. ಕನ್ನಡ ಕಥನಕಾರರು ಯಾರೂ ಇದರಿಂದ ಹೊರಗುಳಿದಿಲ್ಲ. ಡಾ. ಕರೀಗೌಡರು ತಮ್ಮ ಕಥೆಗಳಿಗೆ, ತಮ್ಮ ಬಾಲ್ಯದ ಅನುಭವಗಳನ್ನೇ ಮೂಲವಾಗಿರಿಸಿಕೊಂಡಿದ್ದಾರೆ. ಬಾಲ್ಯ ಕಾಲದಲ್ಲಿ ಊರೊಟ್ಟಿಗಿನ ಬದುಕನ್ನು ಕಂಡು, ಕೇಳಿ, ಅನುಭವಿಸಿ ತುಂಬಿಕೊಂಡರೆ ಅವು ಯಾವತ್ತು ಅಳಿಯಲಾರವೇನೋ. ಬಾಲ್ಯ ಕಳೆದ ಮೇಲೆ ಅನುಭವಗಳ ದಕ್ಕುವಿಕೆಗೆ ಮಿತಿ ಬಂದು ಬಿಡುತ್ತದೆ. ಬಾಲ್ಯ ಕಾಲದಲ್ಲಿ ಮನಸ್ಸು ಎಲ್ಲವನ್ನು ಕೇಳುವ, ನೋಡುವ, ಬೆರೆಯುವ ಸೃಜನಶೀಲತೆ ಹೆಚ್ಚಾಗುತ್ತದೆ. ಹರೆಯಕ್ಕೆ ಬಂದರೆ ಕೇಳುವ, ನೋಡುವ, ಬರೆಯುವ ಅವಕಾಶದಲ್ಲಿ ಆಯ್ಕೆ ಶುರುವಾಗುತ್ತದೆ. ಈ ಆಯ್ಕೆಯಿಂದಲೇ ಅನುಭವಕ್ಕೆ ಮಿತಿ ಬರುತ್ತದೆ. ಮುಗ್ಧತೆ ಮಾಸಿಹೋಗಿ ಬೌದ್ಧಿಕತೆ ಬೆಳೆಯುತ್ತದೆ. ಈ ಮುಗ್ಧತೆ ಮತ್ತು ಬೌದ್ಧಿಕತೆಯ ನಡುವೆ ಕಥೆಗಾರ ನಿಂತು ಕಥೆ ಕಟ್ಟಲು ಪ್ರಯತ್ನಿಸಿ ಯಶಸ್ವಿಯಾಗಿದ್ದಾರೆ. ಡಾ. ಕರೀಗೌಡರು ಹೀಗೆ ತನ್ನ ಅನುಭವಗಳನ್ನು ಕಥೆಯಾಗಿ ಅಭಿವ್ಯಕ್ತಿಸಿದ್ದಾರೋ ಇಂತದ್ದೆ ಒಂದು ಎಳೆಯನ್ನು ಕಥಾ ಪರಂಪರೆಯಲ್ಲಿ ಗುರುತಿಸಬಹುದು. ಉದಾಹರಣೆಗೆ ಕಾಳೇಗೌಡ ನಾಗವಾರ, ಶ್ರೀಕೃಷ್ಣ ಆಲನಹಳ್ಳಿ ಮುಂತಾದವರು ಕರೀಗೌಡರ ಕಥೆಗಳಂತೆಯೇ ರಚಿಸಿದ್ದಾರೆ.

ಬರಹಕಾರರಿಗೆ ಬರೆಯಲು ಆರಂಭಿಸಿದರೆ ಸಾಕು ಬಾಲ್ಯದ, ಪರಿಸರ ಅಲ್ಲಿನ ಅನುಭವಗಳಿಗೆ ಹೋಗುವುದು ಸಾಮಾನ್ಯ ಸಂಗತಿಯಾಗಿದೆ. ಡಾ. ಕರೀಗೌಡರ ವಿಷಯದಲ್ಲಿಯೂ ಇದು ನಿಜ. "ನನ್ನ ಬಾಲ್ಯದ ಗ್ರಾಮೀಣ ಕೃಷಿ, ಸಂಸ್ಕೃತಿಯ, ವ್ಯವಸಾಯ, ಪಶುಪಾಲನೆ ಹಾಗೂ ಕುಟುಂಬದ ಸ್ವಾವಲಂಭನೆಯ ಜೀವನದ ಗಾಢ ಅನುಭವ ನನಗಿತ್ತು. ಈ ಅನುಭವವನ್ನು ನನ್ನ ಕಥೆಗಳಲ್ಲಿ ಅನಾವರಣ ಮಾಡಲು ಕಥೆಗಳನ್ನು ಬರೆಯತೊಡಗಿದೆ. ಅನಂತರ ಕಾಲಮಾನದಲ್ಲಿ ಅನುಭವ ವಿಸ್ತಾರವಾಗುತ್ತ ಹೋದಂತೆಲ್ಲಾ ನನ್ನ ಕಥೆಗಳ ವಸ್ತು ವಿನ್ಯಾಸವೂ ಬದಲಾಗಿತ್ತಾ ಹೋಯಿತು. ಎಂದು ಬರೆದು ಕೊಂಡಿದ್ದಾರೆ ಇದನ್ನವರು ತಮ್ಮ

ಕಥೆಗಳನ್ನು ರಚಿಸುವುದರ ಮುಖಾಂತರ ತಮ್ಮ ಆಸೆಯನ್ನು ನೆರವೇರಿಸಿಕೊಂಡಿದ್ದಾರೆ. ಇಲ್ಲಿ ವ್ಯಕ್ತವಾಗಿರುವ ಎರಡು ಅಂಶಗಳನ್ನು ಗಮನಿಸಬಹುದು. ಒಂದು ಬಾಲ್ಯದ ಅನುಭವ, ಮತ್ತೊಂದು ಅನುಭವದ ವಿಸ್ತಾರ. ಗ್ರಾಮೀಣ ಅನುಭವಗಳು ಮುಖ್ಯವಾಗಿದ್ದು ಅವು ಕಥೆಗಳ ಮತ್ತೊಂದು ಮೂಲಕ ಅಭಿವ್ಯಕ್ತಗೊಂಡಿವೆ. ಅನುಭವ ವಿಸ್ತಾರ. ಅಂದಾಗ ಆ ಅನುಭವಗಳು ಕಥೆಗಾರರ ಗ್ರಾಮೀಣ ಬದುಕಿನ ನೆಲೆಗೆ ಸಂಬಂಧಿಸಿವೆಯೇ ಹೊರತು, ಕಥೆಗಾರ ನೆಲೆಸಿದ ನಗರ ಪರಸರದ ಅನುಭವಗಳಲ್ಲಿ 'ಅನುಭವ ವಿಸ್ತಾರ' ಎಂದು ಹೇಳುವುದು, ಇರುವ ಅನುಭವಗಳಿಗೆ ವೈಚಾರಿಕತೆಯನ್ನು ತುಂಬುವುದೇ ಆಗಿದೆ. 'ಒಂದು ಅಪೂರ್ವ ಸಂಸಾರ', 'ಕೋಳಿಪಾಲು', 'ಗೌರಿ', 'ಕಲ್ಯಾಣಿ', 'ಹಂದಿಲಕ್ಕವ್ವ', 'ಅವಮಾನ' ಮುಂತಾದ ಹತ್ತಾರು ಕಥೆಗಳು ಅಪ್ಪಟ ಗ್ರಾಮೀಣ ಬದುಕಿನ ಅನುಭವಗಳಾಗಿ, ಗಂಡು-ಹೆಣ್ಣು, ಕುಟುಂಬ ಮತ್ತು ಊರೊಳಗಿನ ಮನುಷ್ಯ ಸಂಬಂಧಗಳ ಸಂಕೀರ್ಣತೆಯನ್ನು ಒಳಗೊಂಡಿದೆ. ಕಥೆಗಾರರ ಬೌದ್ಧಿಕತೆಗಿಂತ ಅನುಭವದ ಗಾಢತೆ, ಬದುಕಿನ ವಾಸ್ತವ ನೆಲೆಗಳನ್ನು ಬಿಂಬಿಸುವಲ್ಲಿ ಕರೀಗೌಡರು ಯಶಸ್ವಿಯಾಗಿದ್ದಾರೆ. ಕೆಲವು ಕಥೆಗಳ ಒಳಗೆ ಚಿತ್ರಣಗೊಂಡ ಪರಿಸರ ಗ್ರಾಮೀಣವಾದದ್ದು. ಪಾತ್ರ, ಸನ್ನಿವೇಶ, ಘಟನೆಗಳು, ಗ್ರಾಮ ಪರಿಸರಕ್ಕೆ ಸಂಬಂಧಿಸಿದ್ದರೂ ಕಥೆಯ ತಿರುಳಿನಲ್ಲಿ ವೈಚಾರಿಕತೆ ಸೇರಿಕೊಂಡಿದೆ. ಇವು ಅನುಭಾವಗಳು ಅನ್ನುವುದಕ್ಕಿಂತ ಕಟ್ಟಿಕೊಂಡ ಅನುಭಾವಗಳಾಗಿವೆ.

ಡಾ. ಕರೀಗೌಡ ಬೀಚನಹಳ್ಳಿಯವರು ಕೆಲವು ಕಥೆಗಳ ಮೂಲಕ ಗ್ರಾಮೀಣ ಜನತೆಯ ಜೀವನ ವಿಧಾನವನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಉದಾಹರಣೆಗೆ 'ಒಂದು ಅಪೂರ್ವ ಸಂಸಾರ', 'ಅವಮಾನ', 'ಹಂದಿಲಕ್ಕವ್ವ' ಮುಂತಾದವು. ಪತಿ-ಪತ್ನಿಯರ ಸರಸ-ವಿರಸ ತಂದೆ ಮಕ್ಕಳ ಸಂಬಂಧ ಮನಸ್ಸಿನ ಭಾವನೆಗಳು ಬಡತನ ಮುಂತಾದ ಅಂಶಗಳನ್ನು ವೈಚಾರಿಕತೆಯ ನೆಲೆಯಲ್ಲಿ ಕಟ್ಟಿಕೊಡುವಲ್ಲಿ ಸಫಲರಾಗಿದ್ದಾರೆ. ಇವರು ಕೆಲವು ಪ್ರಯೋಗಗಳನ್ನು ಮಾಡಿದ್ದಾರೆ. 'ಗುಬ್ಬಚ್ಚಿಗಳು' ಕಥೆಯಲ್ಲಿ 'ಗಂಡ-ಹೆಂಡತಿ' ದಾಂಪತ್ಯದಲ್ಲಿ ಕಾಣಿಸುವ ಸರಸ-ವಿರಸಗಳ ಸಂಯೋಗವನ್ನು ಜನಪದ ಕಥೆಗಳ ಶೈಲಿಯಲ್ಲಿ ನಿರೂಪಿಸಿ ಕೊಟ್ಟಿದ್ದಾರೆ. ಇನ್ನೊಂದು 'ಆನೆ' ಕಥೆಯಲ್ಲಿ ಒಬ್ಬ ರಾಜ ಆನೆಯಾಗಿ ಪರಿವರ್ತನೆಗೊಂಡು ಆ ಆನೆ ನಡೆಸುವ ಅವಘಡಗಳನ್ನು ಚಿತ್ರಿಸಲಾಗಿದೆ. ಈ ರೀತಿಯ ಕಥೆಗಳು ಈ ಹಿಂದೆ ಯಾವ ಪಂಥದವರ ಕಥೆಗಳಲ್ಲಿ ಗುರುತಿಸಲಾಗಿಲ್ಲ. ಇದು ಕರೀಗೌಡರ ಹೊಸ ಕಥಾ ವಿಧಾನವಾಗಿದೆ. ಕಥೆಯಲ್ಲಿ ಆಧುನಿಕತೆಗೆ, ಅವಶ್ಯಕತೆಗೆ ಬೇಕಾಗಿರುವ ಅವಶ್ಯಕತೆಗಳ ಕುರಿತು ಮಾತನಾಡಿದ್ದಾರೆ. ವಿದ್ಯಾರ್ಥಿಗಳ ಬಡತನ, ಶಿಕ್ಷಕ ವರ್ಗದವರ ವ್ಯವಹಾರಿಕ ಮನೋಭಾವಗಳು ಆರ್ಥಿಕವಾಗಿ ತಾವು ಶ್ರೀಮಂತರಾಗಬೇಕೆಂಬುವ ಉದ್ದೇಶದಿಂದ ರೈತ ವರ್ಗದವರನ್ನು ಬಳಸಿಕೊಳ್ಳುವುದು. ಹೆಣ್ಣಿನ ತಾಯ್ತನದ ಸಂಗತಿಗಳು ಕಣ್ಣಿಗೆ ಕಟ್ಟುವಂತೆ ಮೂಡಿಬಂದಿವೆ. ಗ್ರಾಮೀಣ ಜನತೆಯ ಜೀವನ ವಿಧಾನಗಳು, ಸಂಪ್ರದಾಯಗಳು ಬದಲಾಗುತ್ತಿರುವ ಗ್ರಾಮೀಣ ಸಮಾಜದ ಸ್ವರೂಪವನ್ನು ಸಹ ತಿಳಿಸಲಾಗಿದೆ. ಹಾಗೆಯೇ 'ಗೌರಿ', 'ಕಲ್ಯಾಣಿ', 'ಹಂದಿಲಕ್ಕವ್ವ' ಕಥೆಗಳನ್ನು

ಗಮನಿಸಿದರೆ ಹೆಣ್ಣಿಗೆ ಸ್ವಾತಂತ್ರ್ಯ ನೀಡುವುದರಲ್ಲಿ ಹಿಂದಿದ್ದೇವೆ ಎಂಬುದು ಕಂಡುಬರುತ್ತದೆ. ಬೆಂಗಳೂರು, ತುಮಕೂರು, ಚಿತ್ರದುರ್ಗ ಈ ಮೂರು ಜಿಲ್ಲಾ ಭೌಗೋಳಿಕ ಪರಿಸರ ಹಾಗೂ ಅಲ್ಲಿ ನಡೆಯುವಂತಹ ಹಬ್ಬ ಹರಿದಿನಗಳು, ಅವರ ಭಾಷಾ ವಿಧಾನಗಳನ್ನು ಸಹ ಸೂಕ್ಷ್ಮವಾಗಿ ಕಟ್ಟಿಕೊಟ್ಟಿದ್ದಾರೆ. ಗ್ರಾಮದ ಜನತೆಯ ಜೀವನ ಕ್ರಮ ನಗರ ಜನತೆಯ ಜೀವನ ಕ್ರಮಗಳನ್ನು ಸ್ವಲ್ಪ ಮಟ್ಟಿಗೆ ತಿಳಿಸಿದ್ದಾರೆ. ಗ್ರಾಮೀಣ ಸಂಸ್ಕೃತಿ ಹಾಗೂ ನಗರ ಸಂಸ್ಕೃತಿಗಳ ಸಮಾಗಮ ಹಾಗೂ ಹಳೆ ತಲೆಮಾರು, ಹೊಸ ತಲೆಮಾರುಗಳು ಮುಖಾಮುಖಿಯಾಗಿವೆ. ಹೀಗೆ ಹತ್ತು ಹಲವು ದೃಷ್ಟಿಕೋನಗಳನ್ನಿಟ್ಟುಕೊಂಡು ಬರೆದ ಕಥೆಗಳು ಅತ್ಯಂತ ನಯವಾಗಿ ರೂಪಗೊಂಡಿವೆ. ಇಲ್ಲಿ ಕೈಗೊಂಡ ಶೋಧನೆಯು ಕೇವಲ ಗ್ರಾಮಸಮಾಜದ ಸ್ವರೂಪದ್ದಾಗಿದೆ. ಆದ್ದರಿಂದ ಕಥೆಯಲ್ಲಿ ಬರುವ ಗ್ರಾಮೀಣ ಸಂಪ್ರದಾಯಗಳನ್ನು ಹೆಚ್ಚು ಗುರುತಿಸಲು ಪ್ರಯತ್ನಿಸಿದ್ದೇನೆ.

ವರ್ತಮಾನದ ಹಲವು ಸಂದಿಗ್ಧಗಳನ್ನು ಗಮನಿಸುತ್ತಿರುವ ಸೂಕ್ಷ್ಮ ಬರಹಗಾರರಾದ ಕಥೆಗಾರರು ರೈತ ಚಳುವಳಿಗಳು, ನಗರೀಕರಣ, ಜಾಗತೀಕರಣ, ಖಾಸಗೀಕರಣ, ಯುವಕರ ಸಮಸ್ಯೆಗಳು ಭಾರತದಲ್ಲಿನ ಹಲವು ರಾಜಕೀಯ ವಿದ್ಯಾಮಾನಗಳು, ರೈತರ ಆತ್ಮಹತ್ಯೆಗಳಂತಹ ಸಮಸ್ಯೆಗಳಿಂದಾಗುತ್ತಿರುವ ಆಹಾರದ ಸಮಸ್ಯೆ, ರಾಜಕೀಯ ವಿದ್ಯಾಮಾನಗಳಿಂದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ನಡೆಯುತ್ತಿರುವ ತಲ್ಲಣಗಳು, ಆರ್ಥಿಕ ವ್ಯತ್ಯಾಸದಿಂದ ಮಧ್ಯಮ ವರ್ಗದ ಜನರ ಜೀವನದಲ್ಲಿ ಕಂಡುಬರುತ್ತಿರುವ ಸಮಸ್ಯೆಗಳು, ಮಹಿಳಾ ಪರ ಹೋರಾಟಗಳಂತಹ, ಹೋರಾಟಗಳಿಂದ ಉಂಟಾಗುತ್ತಿರುವ ಬದಲಾವಣೆಗಳು ಮುಂತಾದವುಗಳನ್ನು ಕಥೆಗಾರರು ತಮ್ಮ ಮುಂದಿನ ಬರವಣಿಗೆಯಲ್ಲಿ ಮುಂದುವರಿಸಬಹುದು. ಏಕೆಂದರೆ ಗ್ರಾಮೀಣ ಬದುಕಿನ ಗಾಢ ಅನುಭವವನ್ನು ಹೊಂದಿದ್ದ ಕಥೆಗಾರರು ತಮ್ಮ ಇದುವರೆಗಿನ ಕಥೆಗಳಲ್ಲಿ ಗ್ರಾಮೀಣ ಬದುಕಿನ ಅನುಭವಗಳನ್ನೇ ಕಥೆಯಾಗಿಸಿದ್ದಾರೆ. ಹಾಗಾಗಿ ಇದುವರೆಗೆ ಕಥೆಗಾರರು ಅನುಭವಿಸಿದ ನಗರ ಜೀವನದ ಅನುಭಗಳು ನಗರ ಪ್ರದೇಶದಲ್ಲಿ ಕಂಡುಬರುತ್ತಿರುವ ಹೊಸ ಸಮಸ್ಯೆಗಳು ಅವರನ್ನು ಕಾಡಿದ್ದೇ ಆದರೆ ಅವರ ಮುಂದಿನ ಕಥೆಗಳಲ್ಲಿ ನಗರ ಜೀವನದ ವಸ್ತುವಿರುವ ಕಥೆಗಳು ಕಥೆಗಾರರಿಂದ ರೂಪುಗೊಳ್ಳುವುದನ್ನು ಓದುಗರು ನಿರೀಕ್ಷಿಸಬಹುದು.

# ಆಧಾರ ಗ್ರಂಥಗಳು

## ಮೂಲ ಪಠ್ಯಗಳು


೦೧. ಡಾ. ಕರೀಗೌಡ ಬೀಚನಹಳ್ಳಿ: ಕರಿಮಣ್ಣಿನ ಗೊಂಬೆಗಳು, ರೂಪಧ್ವನಿ ಪ್ರಕಾಶನ–ಬೆಂಗಳೂರು–೧೯೮೩

೦೨. ಡಾ. ಕರೀಗೌಡ ಬೀಚನಹಳ್ಳಿ: ಸಂಧಾನ, ಅಜಂತಾ ಪ್ರಕಾಶನ–ಬೆಂಗಳೂರು–೧೯೮೭

೦೩. ಡಾ. ಕರೀಗೌಡ ಬೀಚನಹಳ್ಳಿ: ನೆನಪಲ್ಲ ವಾಸ್ತವ, ಕಲ್ಯಾಣಿ ಪ್ರಕಾಶನ–ಬೆಂಗಳೂರು–೧೯೯೧

೦೪. ಡಾ. ಕರೀಗೌಡ ಬೀಚನಹಳ್ಳಿ: ಕಡಲಮಂತು, ಪರಿಸರ ಪ್ರಕಾಶನ–ಶಿವಮೊಗ್ಗ–೨೦೦೪

೦೫. ಡಾ. ಕರೀಗೌಡ ಬೀಚನಹಳ್ಳಿ: ಹಕ್ಕಿ ಬೆಂದೋ, ಹಕ್ಕಿ ಮರಿ ಬೆಂದೋ ಅಜಂತಾ ಪ್ರಕಾಶನ ಬೆಂಗಳೂರು–೨೦೦೪

೦೬. ಡಾ. ಕರೀಗೌಡ ಬೀಚನಹಳ್ಳಿಯವರ ಎಲ್ಲಾ ಕಥೆಗಳು–ಕಣ್ವ ಪ್ರಕಾಶನ–ಬೆಂಗಳೂರು–೨೦೦೭

೦೭. ಡಾ. ಕರೀಗೌಡ ಬೀಚನಹಳ್ಳಿ: ಹೊತ್ತಿನ ಕಣ್ಣಿನ ಮಿಂಚು, ನೆಲಮನೆ ಪ್ರಕಾಶನ–ಮೈಸೂರು–೧೯೯೬


## ಅಧ್ಯಯನಕ್ಕೆ ನೆರವಾದ ಪುಸ್ತಕಗಳು


೦೭. ಆಮೂರ. ಜಿ.ಎಸ್. ಕನ್ನಡ ಕಥನ ಸಾಹಿತ್ಯ ಸಣ್ಣಕಥೆ, –ಸ್ನೇಹಾ ಪ್ರಿಂಟರ್ಸ್ ನಂ:೧೧೪, ೪ನೇ ಅಡ್ಡರಸ್ತೆ, ಬಿ.ಸಿ.ಸಿ ಬಡಾವಣೆ ಅತ್ತಿಗುಪ್ಪೆ, ವಿಜಯನಗರ ೨ನೇ ಹಂತ, ಬೆಂಗಳೂರು–೪೦೨೦೦೩

೦೮. ಕರೀಗೌಡ ಬೀಚನಹಳ್ಳಿ 'ವ್ಯಷ್ಟಿ ಸಮಷ್ಟಿ' –ಅಜಂತ ಪ್ರಕಾಶನ, ೧೦೪ ಪ್ರಕೃತಿ ನಿತ್ಯೋತ್ಸವ ರಸ್ತೆ, ೩ನೇ ಮುಖ್ಯರಸ್ತೆ, ಎಂ.ಪಿ.ಎಂ. ಬಡಾವಣೆ ಮಲ್ಲತ್ತಹಳ್ಳಿ ಬೆಂಗಳೂರು, ೫೬೦೦೫೬

೦೯. ನಂಜಮ್ಮಣ್ಣಿ: ಭಾರತೀಯ ಸಾಮಾಜಿಕ ಸಂಸ್ಥೆಗಳು: –ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೨೦೦೩

೧೦. ಭೈರಪ್ಪ. ಕೆ. ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ, –ಸಪ್ನ ಬುಕ್‌ಹೌಸ್, ೩ನೇ ಮುಖ್ಯರಸ್ತೆ ಗಾಂಧಿನಗರ, ಬೆಂಗಳೂರು, ೨೦೦೮

೧೧. ರಾಮಚಂದ್ರ ಜೋಷಿ, ಭಾರತೀಯ ಸಮಾಜ ರಚನೆ ಮತ್ತು ಪರಿವರ್ತನೆ – ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮು, ಗುಲಬರ್ಗಾ–೫೬೦೦೧೮–೨೦೦೫

೧೨. ಶಾಂತಾ ಇಮ್ರಾಪುರ (ಸಂ) ಸಿರ್ದಿಗಂತ ಸುಂದರ ಪ್ರಕಶನ–ಧಾರವಾಡ–೨೦೦೯

# ಅಧ್ಯಯನಕ್ಕೆ ನೆರವಾದ ಸಂಶೋಧನಾ ಪ್ರಬಂಧಗಳು

೧. ಚನ್ನಮ್ಮ. ಕೆ.ಸಿ: ಕುವೆಂಪು ಕಾದಂಬರಿಗಳ ಸಮಾಜ: ಒಂದು ಅರ್ಥ ಶಾಸ್ತ್ರೀಯ ಅಧ್ಯಯನ. ಕುವೆಂಪು ಕನ್ನಡ ಅಧ್ಯಯನ ಕೇಂದ್ರ ಕುಪ್ಪಳ್ಳಿ-೨೦೦೭

೨. ಧರ್ಮವೀರ ಕೆ.ಹೆಚ್: ಸ್ಥಿತ್ಯಂತರ ಸಮಾಜದ ಸಂಘರ್ಷಗಳ ಸ್ವರೂಪ. ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೭

೩. ರವಿಕುಮಾರ. ಆರ್: ಬೆಸಗರಹಳ್ಳಿ ರಾಮಣ್ಣನವರ ಕತೆಗಳಲ್ಲಿ ಗ್ರಾಮ ಜೀವನದ ಸೂಕ್ಷ್ಮಗಳು ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೭

೪. ಲಿಂಗದಳ್ಳಿ ಹಾಲಪ್ಪ ಕನ್ನಡ ಕಥನ ಸಾಹಿತ್ಯ: ಗ್ರಾಮ ನಗರಗಳ ದ್ವಂದ್ವಾತ್ಮಕತೆ ಕನ್ನಡ ವಿಶ್ವವಿದ್ಯಾಲಯ-೨೦೦೯ ೫. ಲಿಂಗದಳ್ಳಿ ಹಾಲಪ್ಪ ಕನ್ನಡ ಕಥನ ಸಾಹಿತ್ಯ: ಗ್ರಾಮ ನಗರಗಳ ದ್ವಂದ್ವಾತ್ಮಕತೆ ಕನ್ನಡ ವಿಶ್ವವಿದ್ಯಾಲಯ-೨೦೦೯

೫. ಶ್ರೀನಾಥ ಸುಭಾಷ್: ಅಲೇಮಾರಿ ಸಮುದಾಯಗಳ ಸಾಮಾಜಿಕ ಅಧ್ಯಯನ. ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೯

